# ಕನ್ನಡ ನಾಡು

(ಹೈ ಮೆರೀ ದಿಲ್‌ಕಹೀ ಎಂಬ ದಾಗ್ ಚಿತ್ರದ ಹಾಡಿನ ಧಾಟಿ)

ತೆಂಗಿನಾ ಕಂಗಿನಾ ರಂಗಿನಾ।
ಸುಂದರಾ ನಂದದಾ ಮಂದಿರಾ।
ಪ್ರಾಣವೂ ತ್ರಾಣವೂ ಕನ್ನಡಾ ॥ ಪಲ್ಲ ॥

ಸ್ವಪ್ನ ಸಾಮ್ರಾಜ್ಯ। ಆನಂದ ಜಾಲಂ।
ಸೃಷ್ಟಿ ಸೌಂದರ್ಯ। ಶೀತಾನಿಲಂ।
ಪೊನ್ನು ಪೈರಿಂದೆ। ಸುಶ್ಯಾಮಲಂ।
ಸದಮಲಂ। ಸುಲಲಿತಂ। ಸುಖಮಯಂ।
ನಾಡಿದು। ಬೀಡಿದು। ನಮ್ಮದು।
ಪೊನ್ನಿನಾ। ಕನ್ನಡಾ। ಮಣ್ಣಿದು ॥ ೧ ॥

—ತೆಂಗಿನಾ ಕಂಗಿನಾ ರಂಗಿನಾ—

ಇಂಥ ನಾಡಿಂದು। ಹೀಗಾದುದೇನ್।
ಹರಿದು ಹಂಚಾಗಿ। ಪಾಡಾದುದೇನ್।
ಇದನು ಒಂದಾಗಿಸಲ್ ಕೂಡುವಾ।
ಭೇದವಂ। ಬಿಟ್ಟು ಹೋ-। ರಾಡುವಾ।
ನಾಡಿನಾ। ಬಿಡುಗಡೆ। ಮಾಡುವಾ।
ಕನ್ನಡ। ನಾಡನು। ರಚಿಸುವಾ ॥ ೨ ॥

—ತೆಂಗಿನಾ ಕಂಗಿನಾ ರಂಗಿನಾ—

—'ಮಂಜೇಶ್ವರ ವಸಂತ'

## ಸಾತಂತ್ರ್ಯದ ರವಿ

ಸ್ವಾತಂತ್ರ್ಯದ ರವಿ ಮೂಡುತ
ಮೂಡಲ ದಿಗಂತ ಕೆಂಪಗೆ ಬೆಳಗುತಿದೆ!
ದಲಿತರ ದಳ ಮುಂದೊತ್ತುತ ನಾಡಲಿ
ಕ್ರಾಂತಿಯ ಘೋಷಣೆ ಮೊಳಗುತಿದೆ॥
ದುಡಿವಾಳ್ಗಳ ರೈತರ ಕೆಂಬಾವುಟ ಏರುತಿದೆ ಮೇಲೇರುತಿದೆ।
ಸ್ವತಂತ್ರ ಸಮಾನ ಜನತೆಗಳೈಕ್ಯದ ವಿಜಯದ ಬಾವುಟ ಹಾರುತಿದೆ॥
ದಲಿತರ ರಕ್ತದೊಳದ್ದಿದ ಬಾವುಟ ರಕ್ತ ಹೀರುವರನಳಿಸುವುದು।
ಊರನುಣಿಸುವಾ ಕತ್ತಿ ಚಮ್ಮಟಿಗೆ ಲೋಕದಿ ಸ್ವರ್ಗವ ರಚಿಸುವುದು॥
ಶೋಷಣೆ ವಂಚನೆ ಪುಡಿಪುಡಿಗುಟ್ಟುವ ಜನಬಲದೀಧ್ವಜ ಸಾಧಿಪುದು।
ದಾಸ್ಯ ಶೃಂಖಲೆಯ ಕಡಿ ಕಡಿದಿಕ್ಕುವ ಐಕ್ಯವನೀಧ್ವಜ ಬೆಳೆಸುವುದು॥
—ಸ್ವಾತಂತ್ರ್ಯದ ರವಿ—

ಬಿ. ವಿ. ಕೆ.

—ಪ್ರಭಾತ ಮೆರವಣಿಗೆ ಹಾಡು.

## ಕೆಂಪು ಝುಂಡಾ

ಝುಂಡಾ। ರೈತ ಝುಂಡಾ। ಕೂಲಿ ಝುಂಡಾ। ಕೆಂಪು ಝುಂಡಾ॥
ಅರಸ ಧನಿಕ ಶೃಂಖಲೆ ಕಡಿದು। ಬಡವ ದೀನರ ಕೈಹಿಡಿದು।
ಪೊರೆಯುವೆ ನೀನು ಮುನ್ನಡೆವೆ ॥ ೧ ॥ ಝುಂಡಾ . . .
ಭೂಮಾಲಿಕತನ ನಾಶಗೈಯ್ಯುವೆ। ಹಸಿದ ರೈತರಿಗೆ ಹೊಲ ಕೊಡುವೆ।
ಶೋಷಕ ರಾಜ್ಯವ ಅಳಿಸುವೆ ನೀ ॥ ೨ ॥ ಝುಂಡಾ . . .
ಭಂಡವಲಿಗರ ದರ್ಪವಳಿಸಲು। ಕೂಲಿಗಾರರ ರಾಜ್ಯವ ಕಟ್ಟಲು।
ಲೋಕದಿ ಸಮತಾವಾದವ ಬೆಳೆಸಲು ॥ ೩ ॥ ಝುಂಡಾ . . .
ರೈತ ಬಾರಾ। ಕೂಲಿ ಬಾರಾ। ಮುದುಕ ಬಾರಾ। ಯುವಕ ಬಾರಾ।
ಜನತಾ ರಂಗವ ಸ್ಥಾಪಿಸುವಾ। ಜನತಾ ರಾಜ್ಯಕೆ ಮುನ್ನಡೆವಾ ॥ ೪ ॥
ಝುಂಡಾ। ರೈತ ಝುಂಡಾ। ಕೂಲಿ ಝುಂಡಾ। ಕೆಂಪು ಝುಂಡಾ
—ಕೆಂಪು ಝುಂಡಾ—

—ಹಿರಾಸಿಂಗ್ ಇಜಾರಿ.

# ಏರಲಿ ಕೆಂಪು ಬಾವುಟ

ಏರಲಿ ಕೆಂಪು ಬಾವುಟ। ಹಾರಲಿ ಕೆಂಪು ಬಾವುಟ।
ಮೇಲ್ ಮೇಲ್ ಮೇಲ್ ಮೇಲೇರಲಿ ಕೆಂಬಾವುಟ ॥ ಪಲ್ಲ ॥

ರೈತ ಜನರ ಬಾವುಟ। ಜೀತದವರ ಬಾವುಟ।
ಸೋತು ಸುಣ್ಣವಾದ ಜನರ ನೆತ್ತುವಂಥ ಬಾವುಟ। ॥ ೧ ॥

ದುಡಿವ ಜನತೆಯೆಲ್ಲವ ಕೂಡಿಸುವ ಬಾವುಟ।
ಕಡೆಯ ಕಾಲ ಸುಲಿವರ್ಗೆಂದು ಬಿಡದೆ ಸಾರ್ವ ಬಾವುಟ ॥ ೨ ॥

ದಲಿತ ಜನರ ಗೋಳಬಾಳ ನಳಿಸುವಂಥ ಬಾವುಟ।
ಸುಲಿದು ನಲಿವ ಖಳರ ಛಲವ ನಳಿಸುವಂಥ ಬಾವುಟ।
ಬಲದಿ ನೆಲದ ಹೊಲದ ಫಲವ ಮೆಲುವ ಅಲಸಿ ವರ್ಗಕೆ।
ನಲಿವ ಕೆಲೆವ ಉಳಿವ ಕಾಲ ಕಳೆಯಿತೆನುವ ಬಾವುಟ ॥ ೩ ॥

ದುಡಿವ ಬಡವರೊಂದುಗೂಡಿ। ತಡೆಯದೊಡನೆ ಸಂಘ ಹೂಡಿ
ಕಡುಹು ಬೆಡಗಿನೊಡೆಯರನ್ನು। ಕೆಡೆವ ಬಾವುಟ॥
ಹೀರಿ ಪರರ ಸುರಿವ ಬೆವರ। ಸಾರ ಸಿರಿಯು ಮೀರಿದವರ।
ಗರುವ ಹರಿಸೆ ತೋರಿ ಸಾರಿ। ಕರೆವ ಬಾವುಟ ॥ ೪ ॥

ಹಳೆಯ ಕೊಳೆಯ ತೊಳೆಯ ಲೆಳಸು ವಿಳೆಯ ಜನರ ಬಾವುಟ।
ಹೊಳಲನಾಳ್ವ ಖಳರನೆಳೆದು ಕಳೆದು ನಿಲುವ ಬಾವುಟ।
ಸುಲಿವ ಛಲದ ಬಲದ ಮಲ್ಲರಿಲ್ಲವೆನಿಪ ಬಾವುಟ।
ಕೀಳೆಂದುಳಿದರ್ ನಲಿವ ನೆಲೆಗೆ ಮೇಲಕೆತ್ವ ಬಾವುಟ॥
ಈ ಕ್ರಾಂತಿ ಬಾವುಟ। ನಮ್ಮ ಜನರ ಬಾವುಟ।
ನಮ್ಮೊಲವಿನ ಬಾವುಟ। ನಮ್ಮ ಬಲದ ಬಾವುಟ।
ಈ ಕ್ರಾಂತಿ ಬಾವುಟ। ಈ ಕೆಂಪು ಬಾವುಟ ॥ ೫ ॥

—ಏರಲಿ ಕೆಂಪು ಬಾವುಟ—

—ವೆಂಕಟರಾವ್ ಕಾಂದೀಲ್ಕರ್

—-ಧ್ವಜಾರೋಹಣದ ಹಾಡು.

## 4 ಸಾಗಿರಿ ಕೆಂಬಾವುಟ ಹಿಡಿದು

ಸಾಗಿರಿ ಕೆಂಬಾವುಟ ಹಿಡಿದು। ಕ್ರಾಂತಿ ಗೀತ ನುಡಿದು।
ರೈತರೆ ಸಾಗಿರಿ ಕೆಂಬಾವುಟ ಹಿಡಿದು॥
ಇದುವೆ ನಮ್ಮಯ ಶಕ್ತಿಯ ಗುರುತು। ಇದು ನಮ್ಮಯ ಅಭಿಮಾನದ ಗು
ಇದು ನಮ್ಮೆಲ್ಲರ ಸ್ಫೂರ್ತಿಯ ಕುರುಹು। ರಕ್ತ ಪತಾಕೆಯಿದೂ ॥ ಸಾಗಿ
ಇದುವೇ ರೈತರ ರಾಜ್ಯದ ಬಾವುಟ। ಕೂಲಿಕಾರರ ಪ್ರೀತಿಯ ಬಾವುಟ।
ಲೆನಿನನ ಬಾವುಟವು ॥ ಸಾಗಿರಿ..... ॥
ಹೊಲದೊಳು ಕಾಳನು ಬೆಳೆಸುವ ರೈತರೇ
ಅರಿವೆ ನೇಯುವ ಕೂಲಿಕಾರರೇ।
ಸುಂದರವಾದ ಮನೆಗಳ ಕಟ್ಟುವ।
ಉಪ್ಪಾರರೆ ನೀವು ॥ ಸಾಗಿರಿ.... ॥
ರೈತನ ಹೊಟ್ಟೆಗೆ ಹಿಟ್ಟೇಕಿಲ್ಲ?
ಕೂಲಿಯ ಮೈಯ್ಯೊಳು ಬಟ್ಟೆಯು ಇಲ್ಲ।
ನೆರಳಲ್ಲಿರಲು ಮನೆ ನಮಗಿಲ್ಲ।
ಹಗಲಿರುಳೂ ದುಡಿದು ॥ ಸಾಗಿರಿ.... ॥
ನಮ್ಮಯ ಕಾಳನು ಕದಿವವರಾರು?
ಸುಂದರ ಬಟ್ಟೆಯ ಉಡುವವರಾರು?
ಯಾರಿಗಾಗಿ ಕಟ್ಟಿದುದೀ ಅಂದದ
ಮಹಡಿಯ ಮನೆಗಳನು? ॥ ಸಾಗಿರಿ.... ॥
ನೋಡದೊ ಗಿರಣಿಯ ಒಡೆಯನವ।
ಈ ಕಡೆ ಮೆರೆವರು ಭೂಮಾಲಕರು।
ದುಡಿಯದೆ ಧನವನು ಗಳಿಸುವರಿವರು।
ಸುಲಿಗೆಗಾರ ಜನರು ॥ ಸಾಗಿರಿ.... ॥
ದುಡಿದೂ ದುಡಿದೂ ಮಡಿಯುವುದೇಕೆ?
ಒಡಲಿಗಿಲ್ಲದೆ ಬಳಲುವುದೇಕೆ?
ಒಡೆಯರ ಮನೆಯನು ತುಂಬುವುದೇಕೆ?
ಹಗಲಿರುಳೂ ದುಡಿದು ॥ ಸಾಗಿರಿ.... ॥
ಬನ್ನಿರಿ ಕೂಲಿಯ ಜನರೇ ನೀವು।
ಒಂದೆಡೆ ಸೇರಿರಿ ರೈತರೆ ನೀವು।
ಸಂಘವ ಕಟ್ಟಿರಿ ಬಡವರೆ ನೀವು।
ಕೆಂಬಾವುಟ ಹಿಡಿದು। ॥ ಸಾಗಿರಿ.... ॥

— ಸಾಗಿರಿ ಕೆಂಬಾವುಟ ಹಿಡಿದೂ —

## ಸಂಘವನ್ನು ಸೇರುವ

ಬನ್ನಿ ಬನ್ನಿ ಬನ್ನಿರೆಲ್ಲ। ಸಂಘವನ್ನು ಸೇರುವಾ।
ನಮ್ಮ ಹಕ್ಕು ನಮ್ಮದಾಗೆ ಒಂದುಗೂಡಿ ಕಾದುವಾ॥
ಮನುಜರಾಗಿ ಹುಟ್ಟಿ ನಾವ್ ಗುಲಾಮರಂತೆ ದುಡಿವುದೇ?
ನಮ್ಮ ಮಡದಿ ಮಕ್ಕಳೆಲ್ಲ ಹಸಿವೆಯಿಂದ ಸಾಯ್ವುದೆ?
ನಾವು ದುಡಿವ ಫಲವದಿಂದು ಧನಿಯ ಲಾಭಕಾಗಿದೆ।
ಧನಿಯ ಲಾಭ ಕಳೆದುಕೊಟ್ಟ ಕೂಲಿ ನಮ್ಮದಾಗಿದೆ॥
ಲಾಭವೆಂಬ ಪೆಡಂಭೂತವನ್ನು ನಾಶ ಮಾಡದೆ।
ನಮ್ಮ ಹಣೆಯ ಬರಹವೆಂತ ದೇವರನ್ನು ದೂರ್ವುದೆ?
ಸಂಘ ಶಕ್ತಿಯಿಂದ ನಾವು ಕೂಲಿ ಪಡೆಯಬಲ್ಲೆವು।
ಕೂಲಿ ಕೊಡದೆ ಲಾಭಗೈವ ವರ್ಗವಳಿಸಬಲ್ಲೆವು॥
ಕಾಯ ಕಷ್ಟ ಮಾಡಲೆಮಗೆ ದೇಹ ಶಕ್ತಿಯಿಲ್ಲವೆ?
ದುಡಿದುದನ್ನು ಪಡೆಯಲೆಮಗೆ ಸಂಘ ಶಕ್ತಿಯಿಲ್ಲವೆ?
ಛಿ?-ಇದೆಂತ ಲಜ್ಜೆ ನಮಗೆ ಎಲ್ಲರೊಂದುಗೂಡದೇ
ಸುಲಿಗೆಖೋರ ವರ್ಗವನ್ನು ದೇಶದಿಂದ ದೂಡದೆ॥
ದಾಸರಂತೆ ರಾತ್ರಿ ಹಗಲು ದುಡಿವುದನ್ನು ಅಳಿಸುವ।
ಮುಕ್ತರಾಗಿ ವೀರರಂತೆ ದುಡಿದುದನ್ನು ಗಳಿಸುವ॥
ಹಿಂದು ಮುಸಲ್ಮಾನ ಕ್ರೈಸ್ತರೆಲ್ಲರೊಂದುಗೂಡುವ।
ನಮ್ಮ ರಾಜ್ಯ ನಾವು ರಚಿಸಿ ಸ್ವರ್ಗ ಸುಖದಿ ಬಾಳುವ॥
ನಮ್ಮ ಜನ್ಮ ಭೂಮಿಯಲ್ಲಿ ದುಷ್ಟ ರಾಜ್ಯವೀಗಿದೆ।
ದುಷ್ಟ ರಾಜ್ಯವಳಿಸಲೆಮಗೆ ಸಂಘಶಕ್ತಿ ಬೇಕಿದೆ॥
ಯುವಕರೇಳಿ ಮುದುಕರೇಳಿ ಜಯಪತಾಕೆ ಎತ್ತುವ।
ನಮ್ಮ ರಾಜ್ಯ ಸ್ಥಾಪಿಸಲ್ಕೆ ಧೀರತನದಿ ಕಾದುವ॥

—ಬನ್ನಿ ಬನ್ನಿ ಬನ್ನಿರೆಲ್ಲ—

—ಸಿಂಪ್ಸನ್ ಸೋನ್ಸ್

## ೬ ಹೊಡೆ ನಗಾರಿ

ಹೊಡೇನಗಾರಿ ಶಾಂತಿಯದು। ಹೋ। ಶಾಂತಿಯದು। ಹೋ। ಶಾಂತಿಯ
ಪ್ರತಿಧ್ವನಿಸಲಿ ಆಗಸದೀ। ಮೊಳಗಲಿ ಬಾನಿನಲೀ॥ ॥ ಹೊಡೇ . .

ಕವಿದಿವೆಯದೋ ಕರಿ ಮೋಡಗಳು। ಬರಲಿಹುದೋ ಭೀಕರ ತುಫಾನ್।
॥ ಹೊಡೇ . . .

ಅಗ್ನಿವೃಷ್ಟಿಯ ಸುರಿಯಲೆಳಿಸಿದರು। ಯುದ್ಧದಾ ಅರ್ಚಕರು।
ವೃಷ್ಟಿ ಸುರಿಸುತೇ ತಣಿಪೆವಗ್ನಿಯಾ। ಶಾಂತಿಯ ಮುಂದಳೆದವರು।
॥ನಾವು ಶಾಂತಿಯ ಮುಂದಳೆದವರು॥ ಹೊಡೇ . . .

ಆರಿದ ಜ್ವಾಲೆಯು। ಉರಿಯದಿರಲಿ ಪುನಃ ।ಎಚ್ಚರ ಶಾಂತಿಯ ರಕ್ಷಕರೇ।
॥ಬಲು ಎಚ್ಚರ ಶಾಂತಿಯ ರಕ್ಷಕರೇ॥ ಹೊಡೇ . . .

ಇಂದಿನಿಂ ಪ್ರಿಯ। ಭೂಮಾತೆಯು ಪೊಸ। ಸಿಂಗರ ಧರಿಸಿ ನಲಿಯಲಿ।
ಸಪ್ತ ವರ್ಣದಾ। ಬಾನ ಶೋಕದಾ। ಮುಗಿಲು ಮುಸುಕದಿರಲೀ।
ತಾಯ್ತುಂಗಿಯರಾ। ಮಂಗಲ ತಿಲಕವ। ಯುದ್ಧವು ಅಳಿಸದೆ ಇರಲೀ।
॥ನಾಳಿನ ಯುದ್ಧವು ಅಳಿಸದೆ ಇರಲೀ॥ ಹೊಡೇ . . . ॥

ಭಾರತದ ಸುಂದರ ತಾ ನೋಡೋ। ಜಲಫಲ ಕವಿದಿಹಬಯಲಾ।
ಕುತುಬು ಮಿನಾರಾ। ಮಂದಿರ ಮಸಿದಿಯು। ತಾಜಮಹಲ್‌ಧವಳ॥
ಹಿಮಗಿರಿಯ ಬಿಳಿ। ಸ್ಪಟಿಕ ಶಿಖರಗಳು। ಎಂದಿಗೂ ಬಾಗದೆ ಇರಲೀ।
॥ಇನ್ನೆಂದಿಗು ಬಾಗದೆ ಇರಲೀ॥ ಹೊಡೇ . . . ॥

ಕಾರ್ಮಿಕರೇಳಿರಿ। ಕಾರ್ಷಿಕರೇಳಿರಿ। ಎದ್ದೇಳಲಿ ಜನಪದವೆಲ್ಲಾ।
ಭಾರತವೇಳಲಿ। ಯೂರೋಪೇಳಲಿ। ಹಾಡಲಿ ಶಾಂತಿಯ ಸೊಲ್ಲಾ!
ಶಾಂತಿ ಘೋಷದಿಂ ಯುದ್ಧಖೋರರಾ ಎದೆ ಗಡಗಡನೆ ನಡುಗಲೀ
॥ಎದೆ ಗಡ ಗಡನೇ ನಡುಗಲೀ॥ ಹೊಡೇ. . . ॥

—ಹೊಡೇ ನಗಾರಿ ಶಾಂತಿಯದು—

—ವೆಂಕಟರಾವ್ ಕಾಂದಿಲ್ಕಾರ್

# ಶಾಂತಿಯ ಕಹಳೆ

ಚ್ಚರ ಶಾಂತಿಯ ಶತ್ರುಗಳೇ। ಮಾನವ ರಕ್ತ ಪಿಪಾಸುಗಳೇ ॥ ಪಲ್ಲ ॥

ರಡನೆ ಯುದ್ಧದ ಉರಿಯುವ ಬೇಗೆಯು ಇನ್ನೂ ನಿಂತೇ ಇಲ್ಲ।
ತಿಯುರನಗಲಿದ ಸತಿಯರ ಕಣ್ಣೀರಿನ್ನೂ ಆರಿಯೆ ಇಲ್ಲ॥
ಕ್ಕಳ ಕಳೆದಿಹ ಮಾತೆಯ ಕೂಗು ಇನ್ನೂ ನಿಂತೇ ಇಲ್ಲ।
ಸ್ಟರೊಳೇ ನೀವ್ ಮೂರನೆ ಯುದ್ಧದ ಯಜ್ಞಕೆ ಎಳೆಸುವಿರಲ್ಲ? ॥ ೧ ॥

ಟಂಬಾಂಬಿನ ಕಹಿಯನು ಜಾಪಾನ್ ಜನ ಮರೆಯುವ ಹಾಗಿಲ್ಲ।
ಸ್ಯದೊಳೆಲ್ಲ ಜಗದೊಳಗೆಲ್ಲ ಜನ ಕಂಡದ ನೊಂದಿಹರಲ್ಲ?।
ಮ್ಮಯ ಲಾಭಕೆ ಆಟಂ ಬಾಂಬನು ಸುರಿಯಲು ಹವಣಿಪಿರಲ್ಲಾ?॥
ಚ್ಚೆತ್ತಿಹ ಜನವರ್ಗದ ಇದಿರಲಿ ಇನ್ನಿದು ನಡೆಯುವಂತಿಲ್ಲ ॥ ೨ ॥

ಮ್ಮಯ ಲಾಭವ ಹೆಚ್ಚಿಸೆ ಸಂತೆಯ ಪಡೆಯಲು ಯುದ್ಧವು ಸಲ್ಲ।
ಾಮ್ರಾಜ್ಯವ ವಿಸ್ತರಿಸುವ ಆಸೆಯು ಮುಂದಕೆ ನಡೆಯುವಂತಿಲ್ಲ।
ೃತ ಮಜೂರ ವಿದ್ಯಾರ್ಥಿಗು ನೌಕರ ಯಾರಿಗು ಯುದ್ಧ ಬೇಕಿಲ್ಲ।
ನ ಸಾಮಾನ್ಯರ ಆಹುತಿಗೈಯ್ಯುವ ಆಟವ ತಡೆಯುವೆವೆಲ್ಲ। ॥ ೩ ॥

ನಜೀವನದಲಿ ಸುಖವೀಯುವ ವಿಜ್ಞಾನವ ನೀವ್ ಹೀಗೆಲ್ಲಾ।
ನಹತ್ಯದ ದುಷ್ಕಾರ್ಯಕೆ ಅಪವ್ಯಯಿಸುವುದ ವಿಜ್ಞಾನಿಯು ಒಲ್ಲ।
ನತ ಪ್ರಭುತ್ವವ ಸೋವಿಯೆಟ್ ರಷ್ಯವ ನವೀನ ಚೀನವನೆಲ್ಲ।
ಧ್ವಂಸಗೊಳಿಪ ಈ ಹಂಚಿಕೆ ನಡೆಸಲು ಜನರಾವ್ ಬಿಡುವಂತಿಲ್ಲ ॥ ೪ ॥

ನತ ಪ್ರಭುತ್ವದ ಬೆಳೆಯುವ ಚಳುವಳಿ ಮುರಿಯುವ ಯತ್ನವಿದೆಲ್ಲ।
ಮಲಯ ವಿಯೆಟ್‌ನಾಂ ಕೊರಿಯಾ ಗ್ರೀಸು ಕಂಡವರೆಲ್ಲರು ಬಲ್ಲ।
ಸತ್ಯ ಇದನು ಅರಿತಿಹ ಜನ ವರ್ಗವು ಹಬ್ಬಿದೆ ಜಗದೊಳಗೆಲ್ಲ।
ಶಾಂತಿಯ ಸೇನೆಯು ಇದಿರಿಗೆ ಬಂದರೆ ಮಸಣವ ಸೇರುವಿರಲ್ಲ ॥ ೫ ॥

—ಎಚ್ಚರ ಶಾಂತಿಯ ಶತ್ರುಗಳೇ—

—ವೆಂಕಟರಾವ್ ಕಾಂದೀಲ್ಕಾರ್

# ಕೂಡಿ ನಡೆ

(ಮಿಲ್‌ಕೇ ಚಲೋ.... ಎಂಬ ಹಾಡಿನ ಧಾಟಿ)

ಕೂಡಿ ನಡೇ। ಕೂಡಿ ನಡೆ।
ಕೂಡಿ ನಡೇ। ಕೂಡಿ ನಡೇ। ಕೂಡೀ ನಡೇ।
ಓಹೊ। ಕೂಡಿ ನಡೇ। ಕೂಡಿ ನಡೇ। ಕೂಡೀ ನಡೇ ॥ ಪ ॥
ಕಾಲ ಕರೆವ ಕರೆಯಿದು। ಕೂಡಿ ನಡೇ।
ಬದುಕಿನಾ ಫಲವಿದು। ಕೂಡಿ ನಡೇ।
ಕೂಡಿ ನಡೇ.......
ಮನದ ಮರುಕವೆಲ್ಲ ಹಿಂದ ಹಾಕಿದು ಬಾ।
ಭೇದಭಾವವೆಲ್ಲ ಮರೆತು ಮುಂದೆ ಬಾ।
ಸ್ವತಂತ್ರ ಮಾರ್ಗ ಪ್ರಿಯವೊ ಅರ್ಗೆ ಪ್ರಿಯವೊ ದೇಶವು
ಮನಕೆ ಮನವ ಕೂಡಿ ಒಂದು ಗೂಡಿ ನಡೆದು ಬಾ।
ಕೂಡಿ ನಡೇ......
ಈ ಹಸಿವೆಯೂ।
ಈ ಹಸಿವೆ ಸುಲಿಗೆ ದಮನ ಅತ್ಯಾಚಾರವೇಕಿದು।
ಈ ಯುದ್ಧ ಯುದ್ಧ ವೆಸುವ ಘೋರ ಗಲಭೆಯೇಕಿದು।
ಒಳಗು ಹೊರಗು ಕವಿದ ಅಂಧಕಾರವೇಕಿದು।
ನೊಂದ ನೋವು ಸಾಲದೆ? ಈ ಬೇನೆ ಯೇಕಿದು?
ಕೂಡಿ ನಡೇ.......
ಕಲೆವುದೆಂತು ಸ್ವರವು ಸ್ವರದಿ ರಾಗದ—ರಾಗದ।
ಬೆರೆತು ಜ್ವಾಲೆ ಹರಡುವೊಲ್—ಅಗ್ನಿಯು—ಅಗ್ನಿಯು।
ಎಂತು ಜ್ಯೋತಿಯಿಂದ ಜ್ಯೋತಿ ಉರಿವುದೋ।
ಅಂತೇ ನಡೇ ಎನ್ನ—ನಿನ್ನ ಭೇದ ತೊರೆಯುತಾ।
ಕೂಡಿ ನಡೇ........

— ಕೂಡಿ ನಡೇ ಕೂಡಿ ನಡೇ ಕೂಡೀ ನಡೆ —

—ವೆಂಕಟರಾವ್ ಕಾಂದೀಲ್ಕರ್

## ಹಿಂದಿನ ಯುದ್ಧವು ಸಾಲದೆ?

ಸಾಲದೆ? . . . ಸಾಲದೇ?
ಹಿಂದಿನ ಯುದ್ಧವು ಸಾಲದೇ?
ಇನ್ನೊಂದು ಯುದ್ಧವು ಬರಬೇಕೆ? ॥ ಪಲ್ಲ ॥
ಯಾದವ ಕದನದಿ ಅಕ್ಷೋಹಿಣಿ ದಳ
ಮಡಿಯಿತು ಆ ಕುರು ಭೂಮಿಯಲಿ।
ಯುಗ ಯುಗದಿಂದಲಿ ನಡೆದಿದೆ ಕದನ।
ಹೊನ್ ಹೆಣ್ ಮಣ್ಣಿನ ಸಲುವಾಗಿ ॥ ಸಾಲದೇ . . . ॥ ೧ ॥
ರಣಪೂಜಾರಿಯು ರಣ ಕೋಡಾಡಿ ।
ಶೂರಗೆ ಭೂಷಣ ರಣವೆಂದಾಡಿ ।
ಅರಿಯದ ಜನಗಳ ಬಲಿ ಬಲಿಯಿಕ್ಕಿ ।
ಹಣದುತ್ಸವಗಳ ಹೋಳಿ ಹರಿದಿಹುದು ॥ ಸಾಲದೇ . . . ॥ ೨ ॥
ಹಿಂದಿನ ಯುದ್ಧದಿ ಮಡಿದವರೆಷ್ಟು?
ಮಂಗಳ ಸೂತ್ರ ಕಡಿದುವು ಎಷ್ಟು?
ಮನೆಗಳು ಹಾಳು ಮಠಗಳು ಹಾಳು ।
ತಬ್ಬಲಿ ಮಕ್ಕಳ ಬಿಸಿ ಕಣ್ಣೀರು ॥ ಸಾಲದೇ . . . ॥ ೩ ॥
— ಸಾಲದೆ? ಹಿಂದಿನ ಯುದ್ಧವು ಸಾಲದೆ? —

ಎಂ. ಎಸ್. ಕೃಷ್ಣನ್.

## ಏಳಿ ವೀರರೇ

ಏಳಿ ರೈತ ವೀರರೇ । ಏಳಿ ಕೂಲಿಗಾರರೇ ।
ನಿಮ್ಮ ಸೆರೆಯನಿಂದೆ ತೊರೆದು ಮೇಲಕೇಳಿ ಧೀರರೇ ॥ ಪಲ್ಲ ॥
ಕೈಲಿ ಕೆಂಪು ಬಾವುಟ । ಕ್ರಾಂತಿಗಿರುವೆ ನೀ ಭಟ ।
ದಾಸ್ಯ ಸುಲಿಗೆ ಬೇಡಿ ಮುರಿವ ನಿನ್ನ ಸಮರದಾರ್ಭಟ ॥ ೧ ॥
ನೀನೆ ಕ್ರಾಂತಿ ಜ್ವಾಲೆಯು। ನೀನೆ ಶಾಂತಿ ಮಾಲೆಯು।
ನೀನೆ ಮುಕ್ತಿ ಪ್ರಗತಿ ಶಕ್ತಿ ನೀನೆ ಜಗದ ಜ್ಯೋತಿಯು ॥ ೨ ॥
— ಏಳಿ ರೈತ ವೀರರೇ, ಏಳಿ ಕೂಲಿಗಾರರೇ —

# ಹೊಲದೊಡೆಯ

ಹಂತೆ ಹಂಡೆ ನಿತ್ಯ ಬೆವರನು ಸುರಿಸಿ।
ಬಂದುಗ ಹಿಂದುಗ ಧಾನ್ಯವ ಬೆಳೆಸಿ।
ಹೊಲದ ಮಣ್ಣಿನೊಳು ಮೈಯಾಗೂಡಿಸುವ।
ಒಲವಿಂ ಜನತೆಗೆ ತನಿಯುಣ ಬಡಿಸುವ।
ಬೋರೇ ಗೌಡಗೆ ಉಪವಾಸ।
ನಾರು ಬೇರು ಎಲೆ ಪುದಿ ಗೆಣಸ ॥ ೧ ॥

ಗೇಣಿಯ ತೆತ್ತು ತೀರ್ವೆಯನಿತ್ತು।
ಕಾವು ಕೊಟ್ಟು ಇಟ್ಟಿಟ್ಟಿದಿ ಬಿತ್ತು।
ಕಣಜವ ಕಿತ್ತಿಸ್ಕೊಂಡತ್ತು।
ಒಣಗುವ ಬಾಯಿಗೆ ಇಲ್ಲವೆ ತುತ್ತು।
ಬೋರೆ ಗೌಡನು ಸಾಲದೊಳು।
ಯಾರು ಕೇಳ್ವರುಂಟೀಗೋಳು? ॥ ೨ ॥

ದುಡಿಯುರಿತವನು ತಿನ್ನಲರಿಯನಾ?
ಬಡವನೆ? ರೈತನು ನಾಡಿನ ಒಡೆಯಾ।
ದುಡಿವನೆ ಒಡೆಯನು ಎನ್ನುತ ಸಾರಿ।
ಒಡನೆಯೆ ರೈತನು ಸಂಘವ ಸೇರಿ।
ಬೋರೇ ಗೌಡನು ಕೆಂಬಾವುಟವ।
ಹಾರಿಸಿ ಮುಂಬರಿ ರಾಜ್ಯ ಕಟ್ಟುವ ॥ ೩ ॥

ದೊಣೆಯನೆ ಕಟ್ಟಿ ಬಿಟ್ಟವ ಕಿತ್ತು
ಹೊಲವ ಮಾಡಿಸುವ ಬೆಳೆಸುವ ಮುತ್ತೂ
ಬಲವಿದೆ ಛಲವಿದೆ ನಮ್ಮ ರೈತ ಜನ
ನಲಿವನ್ನಿಯ್ಯ ಬಲಿಸ್ನವರೊಡೆತನ
ಬೋರೇ ಗೌಡನೆ ಹೊಲದೊಡೆಯ
ಬೇರಿನ್ನಾವನು ನೆಲದೊಡೆಯ? ॥ ೪ ॥

—ಬೇರಿನ್ನಾವನು ನೆಲದೊಡೆಯ?—

—"ಜನಶಕ್ತಿ"ಯಿಂದ

## ಶಾಂತಿಯ ನಂದಾದೀಪ

ತಿಯ ನಂದಾದೀಪದ ಕಾಂತಿ ।
ಗಲಿ ಬೆಳಗಲಿ ಜಗವೆಲ್ಲಾ ॥ ಪಲ್ಲ ॥

ಮೂಡುವ ಕತ್ತಲೆಯನು ಹೋಗಾಡಿಸಿ ।
ಮೂಡುತ ಬೆಳದಿಂಗಳೆ ನೀ ಬಾ ।
ಶತ ಶತ ಕೋಟಿ ಶ್ರೀ ಕಂಠದಲಿ ।
ಉಕ್ಕುತ ವಿಶ್ವಕೆ ಸಿಂಧುವೆ ಬಾ ॥ ೧ ॥

ರ್ಷಕ ಕಾರ್ಮಿಕ ರೈತ ಜನಾಂಗ ।
ಡಿತ ಪಾಮರ ವಿಜ್ಞಾನಿ ।
ದ ಶಾಂತಿಯ ಸಹೃದಯರೇ ನೀವ್ ।
ತಿಯ ರಂಗದಿ ಅಣಿಯಾಗಿ ॥ ೨ ॥

ಕೋಟಿ ವಜ್ರಗಳ ಪ್ರಭೆಯಾ ಸೂರ್ಯನ ।
ತೇಜದಿ ಬೆಳಗುವ ಪಂಗ್ತಿಯಿದು ।
ಪಂಗ್ತಿಯ ಮೊದಲಲಿ ನಮ್ಮೀ ಭಾರತ।
ವಿಶ್ವದ ಶಾಂತಿಯ ನಿಸ್ಸೀಮ ॥ ೩ ॥

ಗಸಾಕಿಯ ಜನತೆಯ ಕೊಂದ ।
ಟಂ ಬಾಂಬಿನ ರಣಹದ್ದು ।
ರದ ಹಸಿವೆಯ ಲಾಭದ ಬೇಡಿಯ ।
ರಿಸಿ ಹೊಸ ಜಗ ರಚಿಸೋಣ ॥ ೪ ॥

ನಭದಲಿ ಶಾಂತಿ ಜಲದಲಿ ಶಾಂತಿ ।
ನೆಲದಲಿ ಶಾಂತಿ ಎಲ್ಲೆಡೆಯು ।
ಬಾನಲಿ ಬೆಳಗಲಿ ನೀರಲಿ ಹರಿಯಲಿ ।
ಜಗದಲಿ ನೆಲಸಲಿ ಎಲ್ಲೆಡೆಯೂ ॥ ೫ ॥

12

## ಬನ್ನಿ!

ಜನತಾ ರಂಗಕೆ ಬನ್ನಿ । ಜನತಾ ರಂಗಕೆ ಬನ್ನಿ ॥
ನಾಡಿನ ಮೋಕ್ಷಕೆ ಹೋರಿದ ವೀರರೆ ಶೋಷಕ ರಾಜ್ಯದಿ ಸಿಕ್ಕಿದಿರಿ ।
ರೈತ ವೀರರೇ ಕೂಲಿಗಾರರೇ ಒಂದಾಗಿ ನೀವ್ ಮುಂಬನ್ನಿ
ಹುಡಿದೂ ದುಡಿದೂ ಬೆವರನು ಸುರಿಸಿ ಕೂಳಿಲ್ಲದೆ ನಾವ್ ನರಳುವೆವು
ದುಡಿತದ ಫಲವದು ದುಡಿವರಿಗಲ್ಲದೆ ಮಡಿಯುವುದಲ್ಲವು ಬಿಡುಗಡೆ
ಧನಿಕ ರಾಜ್ಯದ ಮರ್ದನ—ನೀತಿಯು ನಡೆದಿದೆ ಸವಿಸ್ಮಾ ನಾಡಿನಲಿ
ದುಡ್ಡಿನ ದಬ್ಬಿಯು ಸ್ವೇಚ್ಛಾಡಳಿತವ ಅಳಿಸದೆಯೋಸಿದು ಮೋಚನೆಯು
ಗಿರಣಿಯು ನಮ್ಮದು ಭೂಮಿಯು ನಮ್ಮದು ದೇಶವು ನಮ್ಮದು ಜಗವೆಲ್ಲ
ಎನ್ನುತ ಬನ್ನಿ ಜಗ್ಗದೆ ಬನ್ನಿ ಕುಗ್ಗದೆ ಬನ್ನಿ ಜನವೆಲ್ಲಾ ॥
— ಜನತಾ ರಂಗಕೆ ಬನ್ನಿ —

"ಜನಶಕ್ತಿ"ಯಿಂದ

## ಒಂದುಗೂಡಿ ಏಳಿರಿ

ಧೀರ ಕೂಲಿಗಾರ ರೈತರೊಂದುಗೂಡಿ ಏಳಿರಿ ।
ಘೋರ ನರಕ ದಾಸ್ಯವಳಿಸಿ ಸ್ವರ್ಗ ಸುಖದಿ ಬಾಳಿರಿ ॥
ಜಗದ ಧನಿಯ ಕಾಟ ನಿಲ್ಲಬೇಕೆನುತ್ತ ಹೇಳಿರಿ ।
ಹಗಲು ರಾತ್ರೆ ದುಡಿವ ಫಲವ ಪಡೆವ ಹಕ್ಕು ಕೇಳಿರಿ ॥
ನಮ್ಮ ಮೈಯ್ಯ ಬೆವರ ಫಲವನುಂಡು ಸೊಕ್ಕಿ ಧನಿಕರು ।
ನಮ್ಮ ತಲೆಯನೊದೆದು ಅಟ್ಟಹಾಸದಿಂದ ಕುಣಿವರು ॥
ನಮ್ಮ ಹಣೆಯ ಬರೆಹವಯ್ಯೊ ಸಾಕಿದೆನುತ ಹಳಿಯುವೆ।
ನಮ್ಮ ಹಣೆಯ ಕಣ್ಣು ತೆರೆದು ಸುಲಿಗೆಯನ್ನು ಸುಡುವುದೇ ॥
ಜಯವು ಕೆಂಪು ಧ್ವಜಕ್ಕೆನುತ್ತ ಎಲ್ಲರೊಂದು ಗೂಡುತ ।
ಜಯವು ಸಂಘ ಶಕ್ತಿಗೆನುತ ಸಮರಪಥದಿ ಸಾಗುತ ॥
ಹೊಲಕೆ ದುಡಿವ ರೈತನೊಡೆಯನೆಂಬ ನ್ಯಾಯ ನೆಲಸಲು ।
ಸುಲಿಗೆ ದಾಸ್ಯ ರಾಜ್ಯವಳಿದು ಜನರ ಮುಕ್ತಿ ಫಲಿಸಲು ॥
— ಸ್ವರ್ಗ ಸುಖದಿ ಬಾಳಿರಿ —

## ದುಡಿಯುವ ಜನ ಒಂದೇ

ಒಂದೇ ಒಂದೇ ಒಂದೇ—
ಒಂದೇ ಒಂದೇ ದುಡಿಯುವ ಜನವೊಂದೇ—।
ದುಡಿಯುವ ಜನವೊಂದೇ ॥ ಪಲ್ಲ ॥
ತನುವಿಂ ಮನದಿಂ ನೆಲೆಯಿಂ ದುಡಿಯುವ ಜನವೊಂದೇ।
ಜನದೇಳಿಗೆಯಾಗುವದಿದೆ ಐಕ್ಯದ ಬಲದಿಂದೇ ॥ಒಂದೇ ಒಂದೇ . . .॥
ಗಿರಣಿ ಕಚೇರಿಯು ಹೊಲದೊಳು ದುಡಿಯುವ ಜನವೊಂದೇ।
ಒಂದೇ ಒಡಕು ಬದುಕು—ದುಡಿವರ ಪಾಡೊಂದೇ।
ಸ್ಥಿತಿಯೊಂದೇ, ಗತಿಯೊಂದೇ, ತೋರುವ ಗುರಿಯೊಂದೇ।
ಈ ಬಲವನು ಮುರಿವರು-ಅವರಿದ್ದರು ಒಂದೇ, ಇರದಿದ್ದರು ಒಂದೇ।
ಬಡವರ ಬಾಳುನ್ನತ್ತಿಯಪ್ಪುದು ಐಕ್ಯದ ಬಲದಿಂದೇ ॥ ೧ ॥ ಒಂದೇ ಒಂದೇ॥
ಶಾಂತಿಯು ಸ್ವರ್ಗವು ಪ್ರಗತಿಯು ಜನರ ಸಮರದಿಂದೇ।
ಅದು ಮಂತ್ರವೂ, ಅದು ತಂತ್ರವೂ, ಮುಕ್ತಿಯ ಪಥವೆಂದೇ।
ದುಡಿವ ಜನರ ಬೆವರಿನ ಫಲ ಈ ಆಸ್ತಿ ಪಾಸ್ತೀ।
ಶೋಷಕ ವರ್ಗದ ಸುಲಿಗೆಯು ಇಂದಿದು ಬಲು ಜಾಸ್ತೀ।
ನಾಳಿನ ಸಮತೆಯ ಲೋಕದಿ ಇವರಿಗೆ ಸ್ಥಳ ನಾಸ್ತೀ।
ಇದನರಿಯದ ಕುರುಡರು-ಅವರಿದ್ದರು ಒಂದೇ, ಇರದಿದ್ದರು ಒಂದೇ।
ನಾಡಿನ ಹಿರಿಮೆಯು ಗರಿಮೆಯು ಜನರ ಸಮರದಿಂದೇ ॥ ೨ ॥ ಒಂದೇ ಒಂದೇ
ಫಲವೆಲ್ಲ, ಬಲವೆಲ್ಲ, ಮುಡಿಪಿರಲಿದಕೆಂದೇ।
ಕಲೆ ಸಾಹಿತ್ಯವು ಎಲ್ಲವು ಈ ಹಿರಿಗುರಿಗೆಂದೇ।
ಜನತೆಯ ಮುಕ್ತಿಯ ಕೋರುವ ಪ್ರತಿಯೊಬ್ಬನು ಇಂದೇ
ಬಾಳಿದು ಕಾಣಿಕೆ ಈ ಮಹಾ ಕಾರ್ಯ ಸಿದ್ಧಿಗೆಂದೇ।
ದೃಢ ವಿಶ್ವಾಸದಿ ನಡೆಯಲು ಪಣತೊಡುವಾ ಇಂದೇ।
ಇದನ್ನೊಪ್ಪುವ ಗೆಳೆಯರು ಬರರೆಲ್ಲರು ಇಂದೇ-ನೆರೆಯಲಿ ನಲವಿಂದೇ
ಉನ್ನತ ಜನ ಕ್ರಾಂತಿಗೆ—ಜಯ ಜಯ ಜಯವೆಂದೇ ॥ ೩ ॥
ಒಂದೇ ಒಂದೇ . . . . .
—ದುಡಿಯುವ ಜನವೊಂದೇ—

—ವೆಂಕಟರಾವ್ ಕಾಂದೀಲ್ಕಾರ್

# ನಿಶಿ ಕಳೆಯಿತು

ನಿಶಿ ಕಳೆಯಿತದೊ ಕಿರಣ ಬೀರಿದನು ಅರುಣ।
ಹೊಸ ಕಾಲ ಉದಯವಾಯ್ತದೋ ನೋಡು ಬಾನ ॥ ೧ ॥

ಹಳೆ ಕಾಲದ ಜ್ಞಾನದಮುಖ ಜೋಂಪಡಿಸಿ।
ಕೊಳೆ ರಾಶಿ ಕೂಪದಲಿ ಹೊರಳಿದೆವು ಘಾಸಿ ॥ ೨ ॥

ನಿದ್ದೆಯಲ್ಲಿ ಕನವರಿಸಿ ಅತ್ತಿತ್ತ ಹೊರಳಿ।
ಎದ್ದು ಬಿದ್ದೆವು ದಾಸ್ಯದ್ಹಾಸಿಗೆಗೆ ಮರಳಿ ॥ ೩ ॥

ಗ್ರಣ ಕಾಲ ಸುಖ ನಿದ್ದೆ ಹರಿಯುತಿರಲಾಗ।
ನೊಣ ಕೀಟ ತಗಣೆಗಳು ಕವಿಯಲಿಂತಾಗ ॥ ೪ ॥

ಎಚ್ಚೆತ್ತು ಮೈಮುರಿದು ಕಣ್ದೆರೆದು ನೋಡೆ।
ಬಿಡುಗಡೆಯ ಹಾದಿಯಲಿ ಸಾಗಿಹುದು ನಾಡೆ ॥ ೫ ॥

ಅವರಲ್ಲಿ ಕಾರ್ಮಿಕರು ರೈತ ಬಾಂಧವರು।
ಶೋಷಕರ ತಂತ್ರವಿರೋಧ ಸೈನಿಕರು ॥ ೬ ॥

ಮುಕ್ತಿಯನ್ನು ಸಾಧಿಸುವ ಘೋಷಣೆಯ ಕೇಳಿ।
ಅವರೊಡನೆ ಬೆರೆತು ಮುನ್ನಡೆಯಲಿದ್ದೇಳಿ ॥ ೭ ॥

— ಮುನ್ನಡೆಯಲಿದ್ದೇಳಿ —

—ಎಂ. ಅಪ್ಪು.

## ಏತಕಾಗಿ?

ಕಾಗಿ ಮನುಜ ಬಾಳು—
ಳಿ ಸುಖದಿ ಮೆರೆಯಲೋ?
ಯ ಸವೆಸಿ ನೋವನುಂಡು
ಷ್ಟಪಟ್ಟು ಮಡಿಯಲೋ? ॥ ೧ ॥

ಉರಿವ ಬಿಸಿಲಿಗೊಡಲನೊಡ್ಡಿ
ದುಡಿವುದೇತಕಾಗಿಯೋ?
ಸುಡುವ ಕಿಚ್ಚಿನುದರಕೊಂದು
ತುತ್ತುಕೂಳು ನೀಡಲೋ? ॥ ೨ ॥

ತ್ತ ಭೂಮಿ ತಾಯಿ ನಮಗೆ
ತ್ತವಾಗಿ ನೀಡಿದಾ
ಸರ್ಗ ಸಿರಿಯ ಬೆವರು ಸುರಿಸಿ
ಡೆದು ಸುಖದಿ ಬಾಳಲೊ? ॥ ೩ ॥

ಜನ್ಮ ಭೂಮಿ ಜನತೆಗೆಂಬ
ಹಿರಿಯದೊಂದು ಸೊಲ್ಲಿದೆ
ದೇವ ಕೊಟ್ಟುದೆಮಗೆ ಮಾತ್ರ
ವೆಂದು ಕೆಲರ ಗುಲ್ಲಿದೆ ॥ ೪ ॥

ಶ್ರಮದ ಫಲವು ಶ್ರಮಿಸು
ರವರಿಗೆಂಬ ನ್ಯಾಯ ನೆಲಸದೆ?
ದುಡಿವನೊಬ್ಬ ಪಡೆವನೊಬ್ಬ
ನೆಂಬ ಮೋಸವಳಿಯದೆ? ॥ ೫ ॥

—ಏತಕಾಗಿ ಮನುಜ ಬಾಳು?—

—ಎಂ. ಅಪ್ಪು

# ಏಳಿರೇಳಿರಿ

ಏಳಿರೇಳಿರಿ ಬೇಗ ಕಾರ್ಮಿಕ ರೈತ ಬಾಂಧವರೇ।
ಲೋಕ ಶಾಂತಿ ಸಮತೆಗಾಗಿ ಸಾಗಿ ಮುಂದೆ ವೀರರೇ ॥

ಲೋಕವೆಲ್ಲ ಕೂಗಿ ಕರೆವ ವೀರ ಘೋಷಣೆ ಕೇಳಿರಿ।
ನಮ್ಮ ಸುಲಿಯುವ ತಂಡದವರ ಕೋಟೆ ಕೊತ್ತಳ ಮುರಿಯಿರಿ ॥

ಜನರ ಕೊರಳಿನ ನಾದ ನಾಲ್ಕೂ ದಿಕ್ಕು ಮೂಲೆ ಕಟ್ಟಿದೆ।
ದಲಿತ ಜನತೆಯು ಜ್ಞಾನದೊಡಲು ಹೊಕ್ಕು ಸೇರಿ ಮುಟ್ಟಿದೆ ॥ ೩

ದಾಸ್ಯಕೂಪದಲ್ಲಿ ಬಿದ್ದು ಬಾಳುತಿರುವುದೇತಕೆ?
ಮಂಕು ಮೌನ ಮುರಿಯದಿರುವುದು ದ್ರೋಹವಿನ್ನು ನಾಡಿಗೆ ॥ ೪

ದುಡಿಮೆಯೊಂದೇ ನಮ್ಮ ಪಾಲಿಗೆ ಬಂದ ಕರ್ಮಭಾಗವೋ?
ಉಣಲಿಕನ್ನ ಶೂನ್ಯವಾಗಿರಲೆಂತ ರಾಮ ರಾಜ್ಯವೋ ॥ ೫

ವಿಧಿಯ ಬರಹವೆಂತ ಕೆಲರು ಮೋಸ ನುಡಿಯಬಲ್ಲರು।
ಬರೆಹವಲ್ಲ ಕೃತಕವೆಲ್ಲ ತಿಳಿಯಬೇಕಿದನೆಲ್ಲರು ॥ ೬

ನಾವು ದುಡಿಯಬಲ್ಲೆವಾದರೆ ಉಣಲು ನಾವು ಬಲ್ಲೆವು।
ದಣಿದು ಮಣಿದು ಬದುಕುವಂತ ಬಾಳನಿನ್ನು ಒಲ್ಲೆವು ॥ ೭

ಶಾಂತಿ ಸಮತೆಯಿಂದ ನಾವು ಸೌಖ್ಯದಿಂದ ಬಾಳಲು।
ಜಗದ ದಲಿತ ಜನರ ಐಕ್ಯ ಶಿಬಿರವನ್ನು ಸೇರಲು ॥ ೮

—ಏಳಿರೇಳಿ ಬೇಗ ರೈತ ಕೂಲಿಗಾರರೇ—

—ಎಂ. ಅಪ್ಪು

# ಕ್ರಾಂತಿ ಚೀನಾ

ಉರವಣಿಸಿ ಬಂತು। ಉರವಣಿಸಿ ಬಂತು।
ಬಿಡುಗಡೆಯ ತಂತು। ಕ್ರಾಂತಿ ಚೀನಾದ ತೇಜ।
ಎದ್ದ ರೈತನಾ ತೇಜ। ಜನರ ನಲ್ಮೆಯ ತೇಜ ॥ ಪಲ್ಲ ॥
ಉತ್ತರದ ದಿಕ್ಕಿಂದೆ ಬಂತು, ಎತ್ತರದ ನಾಡಿಂದೆ ಬಂತು।
ಉನ್ನತದ ಧ್ಯೇಯವನು ತಂತು, ಜನರ ವೈರಿಗಳನಳಿಸುತ್ತ ಬಂತು ॥ ೧ ॥
ಬಿಡುಗಡೆಯ ಕಂಡ ಗ್ರಾಮ ಮಧ್ಯದಿ ಬಂತು।
ಪೀಡಕರ ತಂಡಗಳ ಚಡಪಡಿಸಿ ಬಂತು।
ಒಡೆಯ ವರ್ಗದ ದುರ್ಗ ಮರ್ಧಿಸುತೆ ಬಂತು ॥ ೨ ॥
ನಗರಗಳ ಗಿರಣಿಗಳ ಬಿಡಿಸುತ್ತ ಬಂತು।
ಹುಟ್ಟು ದಾಸ್ಯದ ಕೆಟ್ಟ ಚಾಳಿಯ ನಟ್ಟಿಸುತ ಬಂತು।
ಕೀಳೆಂದು ಹಳಿದವರೆ ಆಳುವವರೆಂದು ಸಾರಿ ಬಂತು ॥ ೩ ॥
ಜಗದಿ ಜನರನು ಆಳ್ವ ಕಾಲದ ಕಡೆಯ ದಿನಗಳು।
ಹೋದವೆಸ್ನುತ ಯುಕ್ತ ರಾಷ್ಟ್ರದ ಆಳ್ವ ವರ್ಗಕೆ।
ಜನರ ಶಕ್ತಿಯು ಸ್ವಾಭಿಮಾನವ ತೋರಿಸುತೆ ಬಂತು ॥ ೪ ॥
ದುಡಿವ ಜನಗಳು ಜೀತ ಮಾಡುವ।
ಸತ್ರ ದಿನಗಳು ನೆನೆಯದಂತೆಯೆ।
ಎಲ್ಲ ಏಷ್ಯಕೆ ಕ್ರಾಂತಿ ಮಾರ್ಗದಿ।
ಸೋದರತೆಯನು ಸಮತೆ ಜಗವನು।
ತೋರಿಸುತೆ ಬಂತು ॥ ೫ ॥
ದಾಸ್ಯದಾ ತೆರೆಯನ್ನು ಹರಿದು ಬಂತು।
ಬಿಡುಗಡೆಯ ಪ್ರಜ್ವಲಿಪ ಪಂಜೊಡನೆ ಬಂತು।
ನಾಡ ಜನಗಳು ಆಳ್ವ ಹಕ್ಕೊಡನೆ ಬಂತು ॥ ೬ ॥
ಬಿಗಿದ ಮುಷ್ಟಿಯ ಕೂಲಿ ಜನರ ವರ್ಗ ಪಕ್ಷವು ಬಂತು।
ನಾಲ್ಕು ಸಾವಿರ ಲಕ್ಷ ರೈತರ ಪ್ರೀತಿ ಪಕ್ಷವು ಬಂತು।
ನಗರಗಳ ಪ್ರಾಂತಗಳ ಬಿಡಿಸುತ್ತ ಬಂತು ॥ ೭ ॥

"ಶಾಸ್ತ್ರಿ"

## ನಿಜ ಕತೆ.....

ಕಲ್ಪನೆಯ ಕಥೆಯಲ್ಲ।
ಕಟು ಸತ್ಯ ಕಾಣುವಿರಿ॥
ಆದಂದ ಕವಿತೆಯಲಿ।
ತೋರಿಸುವುದೆಂತು? ॥ ೧ ॥

ಕವಿ ಬರೆಯ ಬಲ್ಲನದ।
ಕವಿ ಕಾಣ ಹೋಗುವನೆ॥
ಬರೆದರದು ರುಚಿಸುವುದೆ।
ಮನರಂಜಕರಿಗೆ? ॥ ೨

ಮಾನವನು ಸುಖಿಯೆಂದು।
ವೇದ ಸುದಿ ಸಾರುತಿದೆ॥
ಇರಬಹುದು ಹಿರಿವಚನ।
ಸುಳ್ಳಾಗ್ಯದೆಂತು? ॥ ೩ ॥

ಈ ಬಾಳು ಬೇಸತ್ತು।
ಜೀವನದ ಕೊನೆಯಂಕ॥
ತಾವೆ ಬಯಸುವರಂತೆ।
ಕೇಳುವಿರಿ ವಾರ್ತೆ ॥ ೪ ॥

ಆಯುಷ್ಯ ಬಹು ಭಾಗ।
ಶ್ರಮಕೆ ಮುಡಿಪಾಗಿಟ್ಟು॥
ಕಾಯ ಸವೆದ ಮೇಲೆ।
ಬಾಯಿ ಬಿಡುವವರೆಷ್ಟು? ॥ ೫ ॥

ಇರಲು ಮನೆ ಮಠವಿಲ್ಲ।
ಗಳಿಸಿದ ಹಣವಿಲ್ಲ॥
ಮರದಡಿಯೆ ಮನೆಯಾಗಿ।
ಬಾಳುವವರೆಷ್ಟು? ॥ ೬ ॥

ವ್ಯಾಧಿ ಭಾದೆಯು ತಟ್ಟಿ।
ಚಿಂದಿ ವಸ್ತ್ರವ ಕಟ್ಟಿ॥
ಬೀದಿ ಬಳಿ ಬೀಡ್ಬಿಟ್ಟು।
ನರಳುವವರೆಷ್ಟು? ॥ ೭ ॥

ಭಿಕ್ಷಾನ್ನ ಜೀವಿಗಳು।
ಎಷ್ಟಿಲ್ಲ ನಾಡಿನೊಳು॥
ಅವರಿಗೆಲ್ಲಿದೆ ಜಾಗ।
ಈ ನಾಡಿನೊಳಗೆ? ॥ ೮ ॥

ಭೂಮಾತೆಯುದರದಲಿ।
ಜನಿಸಿರುವ ನಾವೆಲ್ಲ॥
ಸೋದರರು ಸಹೋದರಿಯ।
ಅಲ್ಲವೇ ಜಗದಲ್ಲಿ? ॥ ೯ ॥

## ಮುಂದೆ ಮುಂದೆ ಸಾಗಲಿ

— ಪಲ್ಲವಿ —

ಸಾಗಲೀ — ಸಾಗಲೀ — ಸಾಗಲೀ।
ಜನತೆಯೈಕ್ಯ ಶಕ್ತಿಯು ಮುಂದೆ ಮುಂದೆ ಸಾಗಲೀ ॥ ಪಲ್ಲ ॥

— ೧ —

ಧೀರ ಕೂಲಿಗಾರ ವರ್ಗ ಸಮರ ಪಥದಿ ಸಾಗಲೀ।
ಭೂಮಿತಾಯಿ ಮಕ್ಕಳೊಡನೆ ಒಂದುಗೂಡಿ ಸಾಗಲೀ।
ಬುದ್ಧಿಶಾಲಿಗಳನು ಕೂಡಿ ಕ್ರಾಂತಿ ಮುಖದಿ ಸಾಗಲೀ
ಸಾಗಲೀ .....।
ಜನತೆಯೈಕ್ಯ ಶಕ್ತಿಯೂ .....॥

— ೨ —

ಮಟ್ಟದಿಂದ ಮಟ್ಟಕೆ — ಸುತಳದಿಂದ ಸತ್ಯಕೆ।
ಕಿರಿಮೆಯಿಂದ ಹಿರಿಮೆಗೆ — ಅಲ್ಪದಿಂದ ಅಧಿಕಕೆ।
ಒಂದರಿಂದ ಅಮಿತಕೆ — ಶೂನ್ಯದಿಂದ ಪೂರ್ಣಕೆ
ಸಾಗಲೀ — — — — — —।
ಜನತೆಯೈಕ್ಯ ಶಕ್ತಿಯೂ — — —॥

— ೩ —

ಕಿರಿಯ ತೊರೆಯು ಹರಿಯ ತೊಡಗಿ ಒಂದಕೊಂದು ಬೆರೆಯುತಾ।
ಬೆರೆತು ಕಲೆತು ಭರಿತ ನದಿಯದಾಗಿ ಮುಂದೆ ಹರಿಯುತಾ।
ನದಿ ನದಗಳು ಸೇರಿ ಮಂದಗತಿಯೊಳ್ ಮುಂದೆ ಸಾಗುತಾ।
ಬೆಟ್ಟ ಕೊರೆದು ಹರಿವ ರಭಸ ಕಲ್ಲು ಕೊಳೆಯ ತೊಳೆಯುತಾ।
ಸಾಗಲೀ — ಸಾಗಲೀ — ಕ್ರಾಂತಿಯೊರತೆ ಸಾಗಲೀ
ಜನತೆಯೈಕ್ಯ ಶಕ್ತಿಯೂ - - - -

— ೪ —

ಹಲವು ಹೊಳೆಗಳೆಲ್ಲ ಕಲೆತು ಸಲಿಲ ಕಡಲ ಸೇರುವೋಲ್।
ಅನಂತ ಸಾಗರಾವು ತಾನು ಹರಡಿ ಹಿರಿದು ಮೊರೆಯುವೋಲ್।

ಸುಳಿಗೆಗೊಳಗುಗೊಂಡ ವರ್ಗ ಬದ್ಧ ಸುಘಟನೆಯೋಲ್ ಕೂಡಿಕೋಲ್।
ಒಂದಿದಾಗಿ ಲೋಕದೊಳಗೆ ಜ್ವಲಿಪ ಶಕ್ತಿಯಾಗುವೋಲ್

ಸಾಗಲೀ - - - - - -
ಜನತೆಯೈಕ್ಯ ಶಕ್ತಿಯು - - - -

— ೫ —

ಗ್ರಾಮಗಳಲಿ ಹುಟ್ಟುತ ಊರಿನೊಳಗೆ ಹರಡುತ।
ಪ್ರಾಂತ್ಯಗಳಲಿ ಹಬ್ಬುತ ದೇಶವೆಲ್ಲ ಮೊರೆಯುತ।
ದೇಶ ದೇಶಗಳಲಿ ಶಕ್ತಿಗೊಂಡು ಪ್ರಬಲವಾಗುತ।
ವಿಶ್ವವೆಲ್ಲ ಹಬ್ಬಲೀ—ಕ್ರಾಂತಿವಾಣಿ ಮೊಳಗಲೀ।
ವಿಜಯದೀಪ ಬೆಳಗಲೀ—ಕೆಂಪು ಧ್ವಜವು ಹಾರಲೀ।
ಹಾರಲೀ—ಏರಲೀ—ಮೊರೆಯಲೀ—ಧರಿಸಲೀ

ಸಾಗಲೀ - - - - - -
ಜನತೆಯೈಕ್ಯ ಶಕ್ತಿಯು - - - -

— ೬ —

ಜ್ವಾಲಾಮುಖಿಯು ಸಿಡಿಯುವೋಲ್।
ಬಾನೊಳ್ ಮಿಂಚು ಹೊಳೆಯುವೋಲ್।
ಮುಂಗಾರು ಸಿಡಿಲು ಗುಡುಗುವೋಲ್।
ಕೋಟಿ ರವಿಯು ಮೂಡುವೋಲ್।
ಜನದ ಶಕುತಿ ಕೂಡಲೀ—ಮೂಡಲೀ—ನಾಡಲೀ

ಸಾಗಲೀ - - - - - -
ಜನತೆಯೈಕ್ಯ ಶಕ್ತಿಯು - - - -

— ೭ —

ಕ್ರಾಂತಿ ಪ್ರಭೆಯು ಹರಡಲಿ।
ಕ್ರಾಂತಿ ಜ್ಯೋತಿ ಉರಿಯಲಿ।
ಕ್ರಾಂತಿ ಪಡೆಯು ಗುಡುಗಲಿ।
ಕ್ರಾಂತಿ ಶತ್ರು ನಡುಗಲಿ।

ಸಾಗಲೀ - - - -
ಜನತೆಯೈಕ್ಯ ಶಕ್ತಿಯು - - - -

— ೮ —

ದೇಶಕಾಲ ಮೇರೆ ಮೀರಿ ಜಗದಗಲಕು ಹಬ್ಬಲಿ।
ಅಂಕೆ ಸಂಖ್ಯೆ ಗಣನೆ ಮೀರಿ ಜನತೆಯೊಂದುಗೂಡಲೀ।
ದುಡಿವರೆಲ್ಲ-ಬಡವರೆಲ್ಲ-ಒಡಲೊಂದಾಗಿ ಏಳಲೀ ಸಾಗಲೀ - - -
ಜನತೆಯೈಕ್ಯ ಶಕ್ತಿಯು - - - -

— ೯ —

ಹಸಿದರ ಬಿಸಿಯುಸುರಿನ ಬಿರುಗಾಳಿ ಯುದ್ಧ ಕೇಳಲೀ।
ಬಿದ್ದವರೇ ಗೆದ್ದರೆನುವ ಸುಖದ ಸುದಿನ ಉದಿಸಲೀ
ಶೋಷಿತ ಜನ ಆಶಿಪ ಜಗಕೋಸುಗ ಜನವೇಳಲೀ
ಏಳಲೀ-ಬಾಳಲೀ-ಇಳಿಯಲಿ-ಕೆಳೆಯಲೀ ಸಾಗಲೀ - - -
ಜನತೆಯೈಕ್ಯ ಶಕ್ತಿಯು - - - -

— ೧೦ —

ಮರ್ದಿತ ಜನ-ನಿದ್ರಿತ ಗಣ-ಭದ್ರತೆಯೆಡೆ ಸರಿಯಲೀ।
ಸುಲಿಯುವವರ ಪಾಲನಳಿಪ ಕ್ರಾಂತಿ ಕಾಳಿ ಕರೆಯಲೀ
ಮೊರೆಯಲೀ-ಭರದಲೀ-ಮೊಳಗಲೀ-ಜಗದಲೀ ಸಾಗಲೀ - - -
ಜನತೆಯೈಕ್ಯ ಶಕ್ತಿಯು - - -

— ೧೧ —

ಕೂಗಲೀ- ಕೂಗಲೀ- ಕ್ರಾಂತಿ ಕಹಳೆ ಕೂಗಲೀ
ನೀಗಲೀ- ನೀಗಲೀ- ಕಾಳರಾತ್ರಿ ನೀಗಲೀ
ಸಾಗಲೀ- ಸಾಗಲೀ- ಜನಶಕುತಿಯು ಸಾಗಲೀ
ಬಾಗಲೀ- ಬಾಗಲಿ- ಶೋಷಕಗಣ ಬಾಗಲಿ
ದುಡಿವ ಜನತೆ ವರ್ಗದಖಿಳ ವಿಜಯ ಧ್ವನಿಯು ಮೊರೆಯಲೀ
ಒಡನೆ ನಡೆವ ದೃಢತೆ ಧೈರ್ಯ ಜನರೆದೆಯಲಿ ಸೇರಲಿ
ಬಡ ಜನತೆಯ ಒಡನಾಡಿಯು ಕೆಂಪು ಧ್ವಜವು ಹಾರಲೀ
ಜಗದ ತುಂಬ ಜನರ ನಡುವೆ ಮೆರೆ ನೊರೆಯುತ ಏರಲೀ
ಕೆಂಪು ಧ್ವಜವು ಜಯಿಸಲೀ ದಲಿತ ಜನತೆ ನಲಿಯಲೀ ಸಾಗಲೀ - -
ಜನತೆಯೈಕ್ಯ ಶಕ್ತಿಯು - - - - -

—ವೆಂಕಟರಾವ್ ಕಾಂದೀಲ್ಕಾರ್

## ನವೆಂಬರ 7

ಕ್ರಾಂತಿ ದಿನವದೊ!
ಜಗಕ್ಕೆ ಶಾಂತಿ ದಿನವದೊ!
ಹಸಿದ ಜನರ ಸೊಡಲ ಕಿಡಿಯು ಹಿಡಿದ ದಿನವದೊ॥
ಹಿಡಿದ ದಿನವದೊ ॥ ೧ ॥

ದುಡಿತವೆಲ್ಲ ದೊರೆಯದೆ।
ಹಸಿವಿನುರಿಯು ತಡೆಯದೆ।
ಇವಕ್ಕೆ ಹೊಣೆಯದಾರು ಎಂದು। ಹುಡುಕಿ ತೆಗೆದ ದಿನವದೊ ॥ ೨ ॥

ಸುಲಿಗೆ ಖೋರರಡಗಿದಾ।
ಧನ ಪಿಶಾಚಿ ನಡುಗಿದ।
ದಲಿತ ಜನರ ರಕ್ತ ಧ್ವಜವು। ನಭದಿ ನಲಿದ ದಿನವದೊ ॥ ೩ ॥

ಜಾರಶಾಹಿ ರಶ್ಯದ।
ಘೋರ ನರಕ ದಾಸ್ಯದ।
ಜೇಡಿ ಮುರಿದು ಬಿಸುಟು ಜಗಕೆ। ತೋರಿಸಿರುವ ದಿನವದೊ ॥ ೪ ॥

ನರರ ರಕ್ತ ಹೀರುವ।
ನರ ಪಿಶಾಚಿ ಮಾನವಾ।
ಜನತೆಯಿಂದ ದೂರ ಸರಿದು। ಗವಿಯೊಳವಿತ ದಿನವದೊ ॥ ೫ ॥

ಭಂಡವಳದ ದರ್ಪದಿ।
ಬಲಿತ ಭದ್ರ ಕೋಟೆಯು।
ದುಡಿವ ಜನರ ಹೊಡೆತದಿಂದ। ಬಿರುಕು ಬಿಟ್ಟ ದಿನವದೊ ॥ ೬ ॥
ಲೋಕದ ಮಜೂರರೇ।
ಒಟ್ಟುಗೂಡಿ ವೀರರೇ।
ಜಿಂದಗಿಯುದು ಮೋಕ್ಷವೆಂದು। ಜಗಕ್ಕೆ ಸಾರ್ದ ದಿನವದೊ॥
ಅಂದು ಕೊಟ್ಟ ಕರೆಯದೊ ॥ ೭ ॥

—ಎಂ. ಅಪ್ಪು.

## ದುಡಿವವರ ರಾಜ್ಯ

ಅದೋ ಅತ್ತ ನೋಡು, ದುಡಿವವರ ರಾಜ್ಯದಲಿ, ಕಾಣ್ವ ಹೊಸದು ಬೆಳಕು।
ಹೆಚ್ಚೆಚ್ಚು ಹೊಳೆಯುತಲಿ, ಸ್ಫೂರ್ತಿ ನೀಡುತಲಿ, ತೊಳೆವುದೆಲ್ಲ ಕೊಳಕು।
ಅಲ್ಲಿಲ್ಲ ಸುಲಿಯುವ ಹಿರಿ ಧನಿಗಳು—ಅದು ಅವರ್ಗೆ ಮಾತ್ರ ಕೆಡುಕು।
ಶ್ರಮಪಡುವವರೆಲ್ಲರಿಗೆ ದೊರಕಿಹುದು ಸುಖಸಂತಸದ ಹೊಸದು ಬದುಕು॥
ಇದು ಕಂಡ ಧನಿಗಳಿಗೆ ಸಿಡುಕು।
ಆ ಸುದ್ದಿ ಅವರ್ಗೆ ನಡುಕು ॥ ೧ ॥

ಉದ್ದಗಲಕೆಲ್ಲ ಹರಡಿರುವ ಹೊಲಗಳಲಿ ದುಡಿವ ರೈತರನು ನೋಡು।
ಅವನುಳುವ ಹೊಲವು ಅವ ದುಡಿವ ಫಲವು ದೊರಕುವುದು ಅವಗೆ ನೋಡು।
ಇಲ್ಲುಳುವ ನರಳುವ ರೈತನಂತೆ ಅವಗಿಲ್ಲ ಧನಿಯ ಕೇಡು।
ಧರೆಯೊಳಗೆ ಅವ ಹಿರಿ ರಾಷ್ಟ್ರದಲ್ಲಿ ಕಾಣಿಸದು ಅವಗೆ ಜೋಡು
ಸೋವಿಯೆಟ್ ರೈತರ ನಾಡು।
ಸಮೃದ್ಧಿ ತೃಪ್ತಿಯ ಬೀಡು ॥ ೨ ॥

ದುಡಿಮೆಯೂ ಬರಿಯಾಟವಾಗಿಹುದು ಆರು ಗಂಟೆಗಳ ದುಡಿತ।
ದುಡಿತಕ್ಕೆ ತಕ್ಕ ಪ್ರತಿಫಲವು ದೊರಕುವುದು ಇಲ್ಲ ಧನಿಯ ಹೊಡೆತ।
ಧನದರ್ಪದಿಂದ ಮೆರವಂತ ಅಲಸಿಗಳಿಗಿಲ್ಲ ಸಂಪದದಿ ಹಿಡಿತ।
ದಿನ ದಿನವು ಆಗುವುದು ದುಡಿವ ಕಾಲದಲಿ ಪ್ರಗತಿಶೀಲ ಕಡಿತ।
ದುಡಿಮೆ ಎಲ್ಲವರಿಗೆನುತ।
ಎಲ್ಲರು ದುಡಿವರನವರತ ॥ ೩ ॥

ಜಾತಿ ಜಾತಿಗಳ ಧರ್ಮ ಧರ್ಮಗಳ ನಡುವೆ ಗೋಡೆಯಿಲ್ಲ।
ಬಡವ ಬಲ್ಲಿದರು ಅರಸು ಆಳುಗಳು ಎನುವ ಭೇದವಿಲ್ಲ।
ಅವ ಮೇಲಿನವನು ಇವ ಕೆಳಗಿನವನು ಎಂಬಂತ ಭಾವವಿಲ್ಲ।
ಮನುಜ ಮನುಜರೊಳು ಭೇದವರಸುವಾ ಚಿತ್ರವೃತ್ತಿ ಸಲ್ಲ।
ಇದು ತತ್ವ ಅಲ್ಲಿಯೆಲ್ಲ।
ಸೋವಿಯೆಟ್ ಜನರೊಳೆಲ್ಲ ॥ ೪ ॥

ತುತ್ತನ್ನಕಾಗಿ ಛೀ! ದೇಹ ಮಾರುವ ಸತಿಯರಲ್ಲಿ ಕಾಣೆ।
ಅಳುತಿರುವ ಮಕ್ಕಳ ಗೋಳ ಸಹಿಸದೆ ಸಾಯುವವರ ಕಾಣೆ।

ಪುರುಷ ವರ್ಗದ ದರ್ಪ ಕಠಿಣತೆಯು ಬಲಿಗೆ ಬಲಿಯು ಕಾಣೆ।
ಇನ್ನದನು ಸಹಿಸಲಾ ಸೋವಿಯಟ್ ನಾರಿ ಇಂದವಳು ಬಹಳ ಜಾಣೆ।
ಸ್ತ್ರೀ ಪುರುಷರೊಂದೆ ಜಾಣೆಸೆಣೆ।
ಪುರುಷರಿಗೆ ಇಲ್ಲವಗ್ರಮಣೆ। ॥ ೫

ಅತ್ತಿತ್ತ ನೋಡಿದೊಡೆ ಎತ್ತೆತ್ತ ಅರಸಿದೊಡೆ ನಲಿವ ಬಾಲ ಹಿಂಡು।
ಕಟ್ಟುವೆವು ಹೊಸತುನಾಡೊಂದ ನಾಳೆಯಲಿ ಎನುವ ಯುವಕ ದಂಡು।
ಹೊಸ ಬಾಳ ಗೀತೆಯನು ಹಾಡಿ ನಲಿವ ನವ ಯುವಕ ಯುವತಿಯರ ಕಂಡು
ಎದೆ ತುಂಬಿ ಹರಿಯುವುದು ಸಂತಸದ ಈ ಅಪೂರ್ವ ತಿಸಿಸನುಂಡು।
ಅಕ್ಷಿಮುದು ಪೂರ್ಣ ಗಂಡು।
ತಾರುಣ್ಯ ಮೂರ್ತಿಗೊಂಡು ॥ ೬ ॥

ಮಾರಿ ರೋಗಗಳ ಕ್ರೂರ ಬೇನೆಯಾ ಭೀತಿಯವರಿಗಿಲ್ಲ।
ಮನುಜ ಕುಲವ ನಡುಗಿಸುವ ದೆವ್ವ ಹಸಿವಲ್ಲಿ ಸುಳಿವುದಿಲ್ಲ।
ಮಾನವನ ಬೆದರಿಸುವ ನಾಳಿನದು ಕುತ್ತಿನಾ ಪ್ರಶ್ನೆಯಲ್ಲಿ ಇಲ್ಲ।
ಅಜ್ಞಾನ ಕತ್ತಲಿಯು ಆಟವಲ್ಲಿ ತಾ ಸಾಗುವಂತೆಯಿಲ್ಲ।
ಇಲ್ಲಗಳೆ ಅಲ್ಲಿ ಇಲ್ಲ।
ಜೀವನವು ಜೇನು ಬೆಲ್ಲ ॥ ೭ ॥

ಯುದ್ಧ ಮಾರಿಯು ಪೂಜೆ ಗೈಯ್ಯುವ ಲಾಭ ಖೋರರಿಲ್ಲ।
ಯುದ್ಧಕಾಗಿ ಸನ್ನಾಹ ಗೈಯ್ಯುವ ದೃಶ್ಯ ಕಾಣ್ಬುದಿಲ್ಲ।
ಯುದ್ಧವೆಂಬುದಕ್ಕೆ ಸ್ಥಾನವಿಲ್ಲ ಜನ ಗಣಕೆ ಅದು ಬೇಕಿಲ್ಲ।
ಯುದ್ಧ ಗರ್ಜನೆಯ ಗೈವ ಮಾರಿಗಳ ತಡೆವರವರು ಎಲ್ಲ।
ಕೇಳಿಹೆಯ ಸೋವಿಯಟ್ ಸೊಲ್ಲ।
ಶಾಂತಿ ವಾಣಿಯೇ ನಾಡೊಳೆಲ್ಲ ॥ ೮ ॥

ಜಗದ ಜನತೆಯ ಆಶಾದೀವಿಗೆಯು ಸೋವಿಯೆಟ್ ರಾಜ್ಯ।
ಎಲ್ಲೆಲ್ಲು ದುಡಿವ ಜನಗಣದ ಕಣ್ಮಣಿ ಈ ನವೀನ ರಾಜ್ಯ।
ಭಂಡವಲಿಗರ ಕಣ್ಣು ಕುಕ್ಕಿ ಎದೆ ನಡುಕ ಬರಿಪ ರಾಜ್ಯ।
ಶಾಂತಿ ಸೇನೆಯ ಅಗ್ರನಾಯಕನ ಸ್ಥಾನಪಾಂತ ರಾಜ್ಯ।
ಈ ಸೋವಿಯೆಟ್ ರಾಜ್ಯ।
ಮನುಜಕುಲ ಮುಕ್ತಿ ಸಾಮ್ರಾಜ್ಯ ॥ ೯ ॥

—ವೆಂಕಟರಾವ್ ಕಾಂದೀಲ್ಕಾರ್

# ಎದೆಯು ಕೆರಳಿದಾಗ

ಕಂಬನಿ ತೊರೆಗಳ ಹೊನಲಿನ ಮೊರೆಯಿದು!
ಕೆಂಗೆಟ್ಟಿರುವರ ಗೋಳಂತೆ!
ಪೌರುಷದಾವಿಷವೇರುವುದೊಂದೆಡೆ
ನಾಗರ ಹಾವಿನ ವಿಷದಂತೆ! ॥ ೧ ॥



ಪರಿತಪಿಸುವ ನತಕುಲದಾ ದಾರುಣ
ರೀತಿಯೆ ಭೀಕರವೆನಿಸುತಿದೆ!
ದಿಗಂತದೆತ್ತಲು ಪಡಿನುಡಿ ರೋಧನ!
ಪ್ರಕೃತಿಯೆ ರೊಚ್ಚಿಗೆ ನಿಂತಿಹುದೆ! ॥ ೨ ॥

ಹೃದಯೋದ್ಯಾನದ ಮೃದು ಸುಮ ಮುದುಡಿದೆ!
ವೇದನೆ ಯಾತನೆ ಸೈಸದೆಯೆ!
ಶಾಂತಿ ಸುವೃಷ್ಟಿಯು ಸುರಿವುದ ಬಿಟ್ಟಿದೆ
ಯುದ್ಧದ ಮೇಘವು ಗುಡುತಿವೆ! ॥ ೩ ॥

ರಕುತದ ಕಾಲಿವೆಯೊಂದೆಡೆ ಹರಿದರೆ
ಕ್ರಾಂತಿಯು ಬೇಗೆಗೆ ಉಗಿಯಾಗಿ
ವಿಪ್ಲವ ವೇಷವ ಧರಿಸುತ ಸೂರ್ಯನೆ
ಶೋಷಣೆ ದಹಿಸದೆ ಬಿಸಿಯಾಗಿ ॥ ೪ ॥

ಕರುಳನು ಕೊರೆಯುವ ಬಡವರ ಕೂಗನು
ಮನ್ನಿಸದಿದ್ದರೆ ನೆಮ್ಮದಿಯೆ?
ದೀನರು ದಲಿತರು ಬಲ್ಲಿದರೆನ್ನದೆ
ಎಣಿಸುವುದಾದರೆ ಸೊಗವಿರದೆ? ॥ ೫ ॥

ಕೆ. ಎಮ್. ಕೃಷ್ಣ; ಕುಂಬಳೆ

# ಏನಿದೇನಿದು ಭೇದ?

॥ ೧ ॥

ಒಂದೆ ಕರುಳಿಂದ ಹೊರಬಂದ ಹಲಮಂದಿಗಳು
ಅಣ್ಣ ತಮ್ಮಂದಿರೆನ್ನುವಾಗ
ಆ ಸೋದರತೆಯೊಡನೆ ಸಾದರತೆ ಬೇಡವೇ?
ಅಣ್ಣ ಮಗ, ತಮ್ಮ ಮೃಗವಾಗಲಹುದೇ?

॥ ೨ ॥

ಹಣ್ಣು ಬೆಣ್ಣೆಯ ತಿಂದು, ಮೃಷ್ಟಾನ್ನವನ್ನುಂಡು
ಪಟ್ಟೆ ಪೀತಾಂಬರವನುಡುವುದಂತೆ!
ಅಮೃತವನೆ ಕುಡಿಯುತ್ತ, ಸ್ವರ್ಗದಲಿ ತಿರುಗುತ್ತ
ಅಣ್ಣ ರನ್ನಗಳನ್ನೆ ತೊಡುವುದಂತೆ:

॥ ೩ ॥

ಅನ್ನ ಕಾಣದೆ ಬತ್ತಿ, ಬೆನ್ನಿಗಂಟಿದ ಹೊಟ್ಟೆ
ನೂಲಳಿದು ಜೋಲುತಿಹ ಚಿಂದಿ ಬಟ್ಟೆ,
ಗಂಟಲಾರಿದರವಗೆ ಗತಿ ತೋಡ ನೀರಷ್ಟೆ?
ತಮ್ಮನಿಗೆ ಬಾಳಲಿಕೆ ಊರಿಲ್ಲವಷ್ಟೆ?

॥ ೪ ॥

ಏನಿದೇನಿದು ಭೇದ? ಆಕಾಶ—ಪಾತಾಳ
ಹಗಲು—ಇರುಳಿಗೆ, ಸ್ವರ್ಗ—ನರಕಗಳಿಗೆ!
ಕಣ್ಮುಚ್ಚಿ ಕುಳಿತಪ್ಪ ಕುಣಿಯುತಿದೆ ಭೇತಾಳ
ಈ ನರಕ ವಸತಿಯಿನ್ನೆಷ್ಟು ಗಳಿಗೆ?

॥ ೫ ॥

ಇಲ್ಲ, ಇನ್ನಿಲ್ಲೆಮಗೆ ಸಹನೆ, ಮೀರಿತು ಸಹನೆ!
ಎದೆಯುರಿಯು ಕೆದರುತಿದೆ ಕಿಡಿಯ ಕಾರಿ!
ಇನ್ನೇನು? ದಳ್ಳುರಿಗೆ ಎಡೆಯಿಲ್ಲ! ತಡೆಯಿಲ್ಲ!
ವಿಶ್ವವನೆ ಬಳಸುವುದು ಒಂದೆ ಬಾರಿ!

—ಡಿ. ಮಹಾಲಿಂಗ ಭಟ್ಟ ಪೆರಡಾಲ

# ರೈತರ ಹಾಡು

ನಾಡಿನ ಜನರಿಗೆ ನಾವ್ ಬೆನ್ನೆಲುಬು
ಅನ್ನವ ದುಡಿವುದೆ ನಮ್ಮಯ ಕಸುಬು
ಆದರಿದೇನೆಂದೊರೆಯಲಿ ನಾವು?
ಪಾಲಿಗೆ ಬರುವುದು ಬರಿ ಉಸುಬು — ೧ —

ಮಳೆಯಲಿ ಚಳಿಯುಲಿ ನಡುನಡುಗುತ್ತ,
ಬಿಸಿಲಿನ ಬೆವರಲಿ ಕುದಿಕುದಿಯುತ್ತ,
ಪಾಪದ ಪಶುಗಳ ಎದೆಯುರಿಸುತ್ತ,
ಕೋಲಿಂ ಬಡಿಯುತ ಉಳುವೆವು ಸುತ್ತ
ಧನಿಗಳ ಸ್ವಾರ್ಥಕೆ!! ನಮ್ಮ ಪರಾರ್ಥಕೆ!! — ೨ —

ನೇಸರು ಮೂಡುವ ಮೊದಲಿಂ ಹಿಡಿದು,
ಸಂಜೆಯ ನೆರಳಿನ ಮಂಜಿನ ವರೆಗು,
ಕರ್ಮ ಕ್ಷೇತ್ರದ ವಾತಾವರಣದಿ
ಒಲವನು ಗಣಿಸದೆ, ಮಮತೆಯನೆಣಿಸದೆ
ಬಿರುಮಾತಿನ ವಿಷ ಹಾಲಾಹಲದಿ
ಹೆಂಡತಿ ಮಕ್ಕಳ ಗೆಯ್ಸುವೆವು
ಗೇದೂ ಗೇದೂ ಸಾಯುವೆವು
ಬೆಳೆ ಬರುವಾಗ ಧನಿಗಳು ಬೇಗ
ಬರುವರು ಕೊಂಡೊಯ್ವರು ಮನೆಗೆ
ಉಂಡಿರೊ ನೀವು? ತಿಂದಿರೊ ನೀವು?
ಎಂಬಾ ಪ್ರಶ್ನೆ ದಿಗಂತದ ಹೊರಗೆ
ಎಂದೊ ಜಮೀನಿಗೆ ತೆತ್ತಿಹ ಹಣಕೆ
ನಮ್ಮಾ ಗೆಯ್ಮೆಯ ಫಲ ಬೇಕೇ? — ೩ —

ಎಲ್ಲಾ ದಿನದಲಿ ನಮಗರೆ ಹೊಟ್ಟೆ
ಬರೆ ತಿಳಿನೀರಲಿ ದುಡಿವುದೆ ರಟ್ಟೆ?
ಉಡುವುದು ಮಣ್ಣಿನ ಚಿಂದೀ ಬಟ್ಟೆ
ಹೀಗಾದರೆ ದಿನಗಳೆವುದು ಹೇಗೆ?
ಎಲ್ಲಿದೆ ತೃಪ್ತಿಯ ಹುರುಪು—ನಗೆ?
ಹೊಟ್ಟೆಗೆ ಹಿಟ್ಟಿಗೆ ಬೇಕಾದಷ್ಟು

ಬಟ್ಟೆಯು ಮಟ್ಟಿಗೆ ಸಾಕಾದಷ್ಟು
ಕೊಟ್ಟರೆ ನಾವ್ ಮಾತಾಡೆವು ಮತ್ತು
ಅಷ್ಟಕೆ ಬಂದಿದೆ ನಮಗೆ ವಿಪತ್ತು
ಹೀಗಾದರೆ ಕೃಷಿ ಬೆಳಗುವುದೆಂತು?
ನಮ್ಮಾ ಬೆವರು, ಬಿಸಿ ಕಣ್ಣೀರು,
ನಿಮ್ಮ ವಿಲಾಸಕೆ, ಸುಖ ಸಂಪತ್ತಿಗೆ
ಕಾಂತಿಗೆ ಕೊಡದೇ ಹೊಗೆ-ಬೇಗೆ? - ೪ -

ಬೇಸಾಯವ ನಾವ್ ಹಿರಿದಾಗಿಸಿದರೆ,
ಕಷ್ಟದ ಬೆಳೆಯನು ಹೇಗೋ ಬೆಳೆದರೆ,
ನೀರನ್ನೆಳೆದು 'ಕೊಳಕೆ'ಯ ಬೆಳೆದರೆ,
ಗುಡ್ಡವನಗೆದು ಹೊಸಹೊಲ ಗೈದರೆ,
ಏರುವುದದೊ ಮರು ವರ್ಷಕೆ ಗೇಣಿ
ಧನಿಗೀಯಲಿ ಬೇಕಾಗಿದೆ ಕಾಣಿ - ೫ -

ನಮ್ಮಾ ಹೊಟ್ಟೆಯು ಉರಿಸಿದರಿಂತು
ಕಣ್ಣೀರಿನ ಹೊಳೆ ಹರಿಸಿದರಿಂತು
ಒಂದೇ ಸಾರಿಗೆ ಎಲ್ಲರು ನಾವು
ಕೃಷಿ ಸನ್ಯಾಸವ ಮಾಡುವೆವು
ಮುಷ್ಕರ ಬಾಣವ ಹಿಡಿಯುವೆವು
ಸತ್ತರೆ ಸಾಯಲಿ! ಏನೂ ಬರಲಿ!
ಮುಂಡದಿ ರುಂಡವು ತುಂಡಾಗಿರಲಿ
ಹೆದರೆವು ನಾವು, ಬೆದರೆವು ನಾವು
ದುಡಿತಕೆ ದಿಟವಾಗಿರುವ ಬೆಲೆ
ಪಡೆವೆವು ಅದುವೇ ನಮ್ಮ ನೆಲೆ - ೬ -

ಎಂದಾಗುವುದೋ ರಾಷ್ಟ್ರೋತ್ಕ್ರಾಂತಿ?
ಎಂದಿಗೆ ಬರುವುದೊ ಸಮತಾ ಶಾಂತಿ?
ಅಂದಿನ ವರೆಗೆ ಸುತ್ತಲು ಮುತ್ತಲು
ಸುತ್ತಿದೆ ಮುತ್ತಿದೆ ಬರಿ ಕಗ್ಗತ್ತಲು
ಬಂದೇ ಬರುವುದು ಹೊಸ ಥಳಕು
ಅಂದೇ ನಮ್ಮೀ ನಾಡಿಗೆ ಬೆಳಕು

—ಅಮ್ಮೆಂಬಳ ಶಂಕರ ನಾರಾಯಣ ನಾವಡ, ವಿದ್ವಾನ್, ಕೋಟೆಕಾರ್.

## ಹೊಸಬಾಳು

ಹೊಸ ಬಾಳು ಕಟ್ಟಬೇಕು।
ನಾವೆಲ್ಲ ಹೊಸಬಾಳು ಕಟ್ಟಬೇಕು ॥ ಪಲ್ಲ ॥
ಹೊಸಭಾವ, ರಸಜೀವ। ದಿವ್ಯತಮ ನುಡಿಗುಡಿಯ।
ಕಳಶವನು ಸೃಜಿಸಬೇಕು॥
ದಿಕ್ಕು ದಿಕ್ಕಿಗೆ ಹರಿದು ಹಂಚಿರುವ ಕರ್ನಾಟ
ಪುತ್ತೆ ಒಂದಾಗಬೇಕು ॥ ೧ ॥
ಕವನ ಪಂಕ್ತಿಗಳೊಳಗೆ।
ನುಡಿ ನುಡಿಗೆ ಕ್ರಾಂತಿ ಕಿಡಿ।
ಕುಣಿ ಕುಣಿದು ಚಿಮ್ಮಬೇಕು॥
ಪವಡಿಸಿಹ ಕರುನಾಡು।
ಬಹುದಿನದ ನಿದ್ದೆಯಿಂ।
ದೆಚ್ಚೆತ್ತು ನಿಲ್ಲಬೇಕು ॥ ೨ ॥
ಮೌನದಲಿ ನರಳುತಿಹ।
ದೀನ ದಲಿತರ ಹಸಿವು।
ಬಲು ಬೇಗ ಹಿಂಗಬೇಕು॥
ನಮ್ಮ ರೈತರ ಹಿರಿಮೆ।
ಕೂಲಿಗಾರರ ದುಡಿಮೆ
ಒಂದಾಗಿ ಸೇರಬೇಕು ॥ ೩ ॥
ಸಂಘಟಿತ ಕಾರ್ಮಿಕರು
ವೀರ ಬಾಹುಗಳಿಂದ
ಸಿರಿತನವ ತೊಡೆಯಬೇಕು॥
ಕ್ರಾಂತಿ ಶಕುತಿಗೆ ಬೆದರಿ
ಅರಸು ಗದ್ದುಗೆಯುದುರಿ
ಉರುಳುರುಳಿ ಬೀಳಬೇಕು ॥ ೪ ॥

—ಹೊಸ ಬಾಳು ಕಟ್ಟಬೇಕು—



"ಚದುರಂಗ"

## ಎಚ್ಚರಾಗಿರಿ

ಏಳಿ! ಎದ್ದೇಳಿ! ಎಚ್ಚರಾಗಿರೀ! ಎಚ್ಚರಾಗಿರೀ! ಎಚ್ಚರಾಗಿರೀ!
ದಲಿತ ಪ್ರಜೆಗಳ ಆಶಾ ಜ್ಯೋತಿಯು
ಕಂಡಿತೆಮಗೆ, ಕಂಡಿತೆಮಗೆ, ಕಂಡಿತಿಂದೆಮಗೆ ॥ ೧ ॥

ಬತ್ತಿದೆದೆಯು ಉರಿಯುವೊಡಲು
ಒಂದುಗೂಡಿ ಇದಿರಿಸಿದರೆ
ಲೋಕ ನಡುಗದೇ? ಗಡಗಡೆನ್ನದೇ?
ಶೋಕವೆಲ್ಲವು ಶಮನಗೊಳ್ಳದೇ? ॥ ೨ ॥

ಅದೋ, ಅದೋ, ಅದೋ, । ನೋಡಿರಾಕಡ!
ಪೂರ್ವದಿಶೆಯಲೀ ಬಡಗು ಭೂಮಿಲೀ
ಜನತೆ ಯುಗವದೋ ಉದಯಿಸುತ್ತಿದೇ
ಆ ಪಥದಿ ನಡೆಯಲೂ ನಮ್ಮಿಂದಾಗದೇ? ॥ ೩ ॥

ನಾಳೆ ಬರುವ ಲೋಕವದು ನಮ್ಮದಲ್ಲವೆ?
ಇಂದಿನೀ ಕಾಳರಾತ್ರಿ ಕಳೆವುದಲ್ಲವೆ?
ಬಾರಿಸಿರಿ ನಮ್ಮ ನಡೆಯ ಘಂಟಾಘೋಷವಾ
ಮೊಳಗಿಸಿರಿ ಜನವಿಜಯದ ಜಯನಿನಾದವ ॥ ೪ ॥

ನಡೆಯಲ್ಲೈ, ನಡೆಯಲ್ಲೈ, ನಡೆಯಲ್ಲೈ
ಜನಪದವು ಮುಂದೆ ಮುಂದೆ ಭರದಿ ನಡೆಯುಲ್ಲೈ ॥ ೫ ॥

— ಏಳಿ, ಎಚ್ಚರಾಗಿರಿ, ಭರದಿ ನಡೆಯಿರಿ —

— ವೆಂಕಟರಾವ್ ಕಾಂದೀಲ್ಕರ್

ಸೂಚನೆ: ಒಂದೊಂದು ಸೊಲ್ಲಿನ ಕಡೆಯಲ್ಲಿ ಪಲ್ಲವಿಯನ್ನು ಎರಡೆರಡು ಬಾರಿ ಹೇಳುವುದು.

## ಯುಗದ ಕರೆ

ಯುಗದ ಕರೆಯನಾಲಿಸದೊ, ಅದೋ—
ಇಂಕ್ವಿಲಾಬ್ ಝಿಂದಬಾದ್, ಝಿಂದಬಾದ್, ಝಿಂದಬಾದ್
॥ ಪಲ್ಲ ॥

ದಲಿತ ಜನರ ಐಕ್ಯ ಕರೆಯಿದು—
ಇಂಕ್ವಿಲಾಬ್ ಝಿಂದಬಾದ್, ಝಿಂದಬಾದ್, ಝಿಂದಬಾದ್
॥ ಅನುಪಲ್ಲ ॥

ಒಂದುಗೂಡಿ ಇರುವೆವಿಂದು ರೈತ ಕೆಲಸಗಾರರಾವ್।
ಒಂದುಗೂಡಲಿಹೆವು ಮುಂದು ದಲಿತ ಜನತೆಯೆಲ್ಲ ನಾವ್।
ಅನ್ಯಾಯಿಗಳ ದಮನದಿದಿರು ದುಡಿವರೆಲ್ಲ ಒಂದೆ ನಾವ್।
ಒಬ್ಬರಲ್ಲ ಮಿಲಿಯ ಮಿಲಿಯ ನಾವ್।
ಇಂಕ್ವಿಲಾಬ್ ಝಿಂದಬಾದ್, ಝಿಂದಬಾದ್, ಝಿಂದಬಾದ್
॥ ೧ ॥

ಕಂಡೆವಾವು ನಮ್ಮ ಸುಲಿವ ಹಿರಿಯ ಲಾಭಖೋರರ।
ಕಂಡೆವಾವು ನಮ್ಮ ರಕುತ ಹೀರಿ ಬೆಳೆವ ಧನಿಗಳ।
ಕಂಡೆವಾವು ನಮ್ಮ ತುಳಿವ ರಾಜ್ಯ ಗೈವ ದ್ರೋಹವ।
ಈ ತಂಡಕಿದಿರು ನಮ್ಮ ಕರೆಯಿದೂ।
ಇಂಕ್ವಿಲಾಬ್ ಝಿಂದಬಾದ್, ಝಿಂದಬಾದ್, ಝಿಂದಬಾದ್
॥ ೨ ॥

ಮಣಿಯಲಾರೆ ಆಳುವವರು ಗೈವ ಅತ್ಯಾಚಾರಕೆ।
ಕುಣಿಯಲಾರೆ ಐಕ್ಯ ಮುರಿವ ದ್ರೋಹಿ ಜನರ ತಾಳಕೆ।
ತಣಿಯಲಾರೆ ಸುಲಿಯುವವರ ರಾಜ್ಯ ದರ್ಪ ನೀತಿಗೆ।
ಈ ಗೋಣಸಿಗಿದಿರು ನಮ್ಮ ಕರೆಯಿದು।
ಇಂಕ್ವಿಲಾಬ್ ಝಿಂದಬಾದ್, ಝಿಂದಬಾದ್, ಝಿಂದಬಾದ್
॥ ೩ ॥

ಎಲ್ಲಿ ಕಾಳಸಂತೆ ಲಾಭಖೋರರೆಮ್ಮನಾಳ್ವರೊ।
ಎಲ್ಲಿ ಭೂಮಿಯೊಡೆಯರೆಲ್ಲ ರೈತ ರಕುತ ಹೀರ್ವರೊ।

ಎಲ್ಲಿ ಜನರ ಹೊಟ್ಟೆ ಹಸಿವ ದುಂದಿನಿಂದ ತಣಿಸದೊ।
ತೊಲಗಲಿಂಥ ನೀಚ ರಾಜ್ಯವೂ।
ಇಂಕ್ವಿಲಾಬ್ ಝಿಂದಬಾದ್, ಝಿಂದಬಾದ್, ಝಿಂದಬಾ

ರಕ್ತನದಿಯು ದಿನವು ಹರಿಪ ನೀತಿ ಅಳಿವವರದು।
ಶಕ್ತಿಶಾಲಿ ಜನತೆಯೈಕ್ಯದಿದಿರು ಇನ್ನು ನಡೆಯದು।
ಕುಯುಕ್ತಿ, ಲಾಠಿ, ಗುಂಡು, ಜೇಲು, ಬೆದರಿಕೆಗೆ ಬಾಗದು।
ರಕ್ತವರ್ಣದವರ ಕರೆಯಿದು।
ಇಂಕ್ವಿಲಾಬ್ ಝಿಂದಬಾದ್, ಝಿಂದಬಾದ್, ಝಿಂದಬಾ

—ಯುಗದ ಕರೆಯನಾಲಿಸು—

(**ಸೂಚನೆ:** ಈ ಹಾಡನ್ನು ಗುಂಪಾಗಿ ಹಾಡಲು ಎರಡು ಪಂಗಡ ವಿಭಜಿಸಬೇಕು. ಪಲ್ಲ—ಅನುಪಲ್ಲಗಳನ್ನು ಎರಡು ಪಂಗಡಗಳೂ ಜೊ ಹಾಡುವುದು. ನಂತ್ರ ಪ್ರತಿಯೊಂದು ಸೊಲ್ಲಿನ 1-3 ಪಂಕ್ತಿಗಳನ್ನು ಒಂದನೆ ಡವೂ 2-4 ಪಂಕ್ತಿಗಳನ್ನು ಎರಡನೆ ಪಂಗಡವೂ "ಇಂಕ್ವಿಲಾಬ್ ಝಿಂದಾಬಾ ಎಂಬುದನ್ನು ಜೊತೆಯಾಗಿಯೂ ಹಾಡುವುದು. ಇದರಿಂದ ಹಾಡು ಪರಿಣಾಮಕಾರಿಯಾಗುವುದು.)

ವೆಂಕಟರಾವ್ ಕಾಂದೀಲ್ಕಾ



# ಹೋರಾಟ ಗೀತೆಗಳು

## ಪುಸ್ತಕ ಪರಿಚಯು

ಶ್ರಮಜೀವಿ ಜನರ ಆಶೆ ಆಕಾಂಕ್ಷೆಗಳನ್ನು ಪ್ರತಿಬಿಂಬಿಸುವ ಕವನಗಳು; ಹೋರಾಟಗಳಲ್ಲಿ ಉತ್ತೇಜನ ನೀಡುವ ಹಾಡುಗಳು; ವಿಶ್ವಶಾಂತಿ, ರಾಷ್ಟ್ರ ಸ್ವಾತಂತ್ರ್ಯ, ಜನತಾ ಪ್ರಭುತ್ವಗಳ ಉದ್ದೇಶವನ್ನು ಸಾರುವ ಕವಿತೆಗಳು ಈ ಚಿಕ್ಕ ಪುಸ್ತಕದಲ್ಲಿ ಸಂಗ್ರಹಗೊಂಡಿವೆ. ಅವುಗಳನ್ನು ಆದರದಿಂದ ಜನತೆಗೆ ಅರ್ಪಿಸುತ್ತಿದ್ದೇವೆ.

ಈ ಸಂಗ್ರಹದಲ್ಲಿ ಒಳಗೊಂಡಿರುವ ಗೀತೆಗಳು ಕೇವಲ ಭಾವನಾ ಪ್ರಪಂಚದಲ್ಲಿ ಓಲಾಡುವವರ ರಚನೆಗಳಲ್ಲ. ಬದಲು, ನಮ್ಮ ಜನತೆಯ ಹೋರಾಟಗಳಲ್ಲಿ ಒಂದಲ್ಲವಾದರೆ ಒಂದು ರೀತಿಯಲ್ಲಿ ಸಹಕರಿಸಿರುವವರ ಮತ್ತು ಹಿತೈಷಿಗಳ ಅನುಭವಗಳು ಈ ಹಾಡುಗಳ ಪಂಕ್ತಿಗಳಲ್ಲಿ ಹರಿಯುತ್ತವೆ.

ಬರಿಹಗಾರ ಬಾಂಧವರಿಗೆಲ್ಲ ನಾವು ಚಿರಋಣಿಗಳಾಗಿದ್ದೇವೆ.

ಅಂದವಾದ ಮುಖಪತ್ರದೊಡನೆ ಈ ಕಿರು ಹೊತ್ತಗೆಯನ್ನು ಚಂದವಾಗಿ ಮುದ್ರಿಸಿಕೊಟ್ಟಿರುವ ಅರುಣ ಮುದ್ರಣಾಲಯದವರಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

—ಪ್ರಕಾಶಕರು.

ಬೆಲೆ ಎರಡಾಣೆ

ನವಶಕ್ತಿ ಪಬ್ಲಿಕೇಶನ್ಸ್ ಲಿಮಿಟೆಡ್, ಮಂಗಳೂರು-೧.

ಅರುಣ ಪ್ರೆಸ್, ಮಂಗಳೂರು